ಬ್ರಹ್ಮರ್ಷಿ ಪತ್ರೀಜಿ ಆಶೀರ್ವಾದಗಳೊಂದಿಗೆ

# ಭಾಗವತ ಸನ್ನಿವೇಶಗಳ ಅಂತರಾರ್ಥ

ತಟವರ್ತಿ ವೀರರಾಘವರಾವು

ಕನ್ನಡ ಅನುವಾದ :

ಸುಮಲತ ಜಿ.ಎಸ್.



# ಭಾಗವತ ಸನ್ನಿವೇಶಗಳ ಅಂತರಾರ್ಥ



ರಚನೆ : **ತಟವರ್ತಿ ವೀರರಾಘವರಾವು**
ಅನುವಾದ: **ಪುಷ್ಪಮೋಹನ್**

**ಶ್ರೀರಾಮ ಪಬ್ಲಿಕೇಶನ್ಸ್**
ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,
ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – ೫೬೦ ೦೬೬

---

**ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್**
ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**Bhagavata Saniveshagala Anthartha** Edited by Published by
**Srirama Publications,** Sri Ramadhama Pyaramid Dyanakendra,
Narayanappa Garden, Whitefiled, Bangalore - 560 066.
M.: 9449695503, 80500 82689, 9886532204

| | | |
|---|---|---|
| ಪ್ರಥಮ ಮುದ್ರಣ | : | ಡಿಸಂಬರ್ 2012 |
| ದ್ವೀತಿಯ ಮುದ್ರಣ | : | ಫೆಬ್ರವರಿ 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – ೫೬೦ ೦೬೬<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಾಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಪುಟಗಳು | : | iii+55=58 |
| ಮುಖಚಿತ್ರ | : | ಚಂದ್ರಕಾಂತ ಪಟ್ಟಣ |
| ಬೆಲೆ | : | 40/– ರೂ |

ಮುದ್ರಣ :
**ಪೂರ್ಣಾ ಗ್ರಾಫಿಕ್ಸ್,**
ಬೆಂಗಳೂರು 9844167475

# ವಿಷಯ ಸೂಚಕ

# ಭಾಗವತ ಸನ್ನಿವೇಶಗಳ ಅಂತರಾರ್ಥ



ಪ್ರಸ್ತುತ ಲೋಕದಲ್ಲಿ ಭಾಗವತೆ ಎಂದರೇನು? ಎಂದು ಕೇಳಿದರೆ ಹೇಳಲಾಗದವರು ಸಹ ಇದ್ದಾರೆ. ಶ್ರೀ ಕೃಷ್ಣನ ಬಗ್ಗೆ ಗೊತ್ತು, ಆದರೆ ಶ್ರೀ ಕೃಷ್ಣನ ಜೀವನ ಚರಿತ್ರೆಯೇ ಭಾಗವತೆ ಎಂದು ತುಂಬಾ ಜನಕ್ಕೆ ಗೊತ್ತಿಲ್ಲ.

ಭಾಗವತ ಮಹಾಕಾವ್ಯದ ಮೂಲಕ ವ್ಯಾಸಮಹರ್ಷಿ ಶ್ರೀ ಕೃಷ್ಣ ಭಗವಾನನ ಜೀವನ ಚರಿತ್ರೆಯ ಬಗ್ಗೆ, ಜೀವನದಲ್ಲಿನ ಮುಖ್ಯವಾದ ವಿಷಯಗಳ ಬಗ್ಗೆ ಕೆಲವು ಸನ್ನಿವೇಶಗಳ ಮೂಲಕ ಲೋಕಕ್ಕೆ ತಿಳಿಯಪಡಿಸಲಾಗಿದೆ.

ಆದರೆ ಲೋಕದಲ್ಲಿ ಶ್ರೀ ಕೃಷ್ಣ ಭಗವಾನನ ಜೀವನದಲ್ಲಿ ನಡೆದ ಸಂಘಟನೆಗಳನ್ನು ಸಿನಿಮಾಗಳ ರೂಪದಲ್ಲಿ, ನಾಟಕಗಳ ರೂಪದಲ್ಲಿ, ಟಿ.ವಿ. ಸೀರಿಯಲ್ಸ್ ರೂಪದಲ್ಲಿ, ಚಿತ್ರಿಸಿ ನೋಡಿ ವಿನೋಧಿಸುತ್ತಿದ್ದಾರೆ. ಕಾಲಕ್ಷೇಪಕ್ಕೆ ಉಪಯೋಗಿಸಿಕೊಳ್ಳುತ್ತಿದ್ದಾರೆ. ಆದರೆ ಅಂತಹ ಮಹಾನುಭಾವನ ಜೀವನ ಚರಿತ್ರೆ ವಿನೋಧಕ್ಕಾಗಿ ನೋಡಲು ವ್ಯಾಸಮಹರ್ಷಿ ಲೋಕಕ್ಕೆ ಕೊಟ್ಟಿಲ್ಲ. ಶ್ರೀ ಕೃಷ್ಣನ ಜೀವನದಲ್ಲಿ ಪ್ರತಿ ಸನ್ನಿವೇಶದ ಮೂಲಕ ಒಂದು ಸಂದೇಶವನ್ನು ಅವರು ಲೋಕಕ್ಕೆ ನೀಡಿದ್ದಾರೆ. ಆದ್ದರಿಂದ ಪ್ರತಿ ಸನ್ನಿವೇಶವನ್ನು **"ವಿನೋದಾತ್ಮಕವಾಗಿ ಅಲ್ಲ, ಸಂದೇಶಾತ್ಮಕವಾಗಿ ನೋಡಬೇಕು"**. ವಿನೋದಕ್ಕೆ ಉಪಯೋಗಿಸಿಕೊಳ್ಳುವುದಲ್ಲ, ಆ ಸನ್ನಿವೇಶಗಳಲ್ಲಿನ ಅಂತರಾರ್ಥವನ್ನು ತಿಳಿದು, ಆ ಸಂದೇಶವನ್ನು ಆಚರಣೆಯಲ್ಲಿಡಬೇಕು. ಆಗ ಯಾರ ಜೀವನವಾದರೂ ಧನ್ಯವಾಗುತ್ತದೆ.

ಅಷ್ಟೇ ಅಲ್ಲ ಭಾಗವತ ಅರ್ಥವಾಗ ಬೇಕೆಂದರು ಭಾಗವತದ ಸನ್ನಿವೇಶಗಳನ್ನು ಅರ್ಥಮಾಡಿಕೊಳ್ಳಬೇಕೆಂದರೂ, ಮುಖ್ಯವಾಗಿ ಶ್ರೀ ಕೃಷ್ಣ ಭಗವಾನನು ಯಾರು ಎಂದು ತಿಳಿಯಬೇಕು. ಶ್ರೀ ಕೃಷ್ಣನ ಬಗ್ಗೆ ತಿಳಿಯದೆ, ಅವಗಾಹನೆ ಇಲ್ಲದೇ ಭಾಗವತ ಎಂದೂ ಅರ್ಥವಾಗುವುದಿಲ್ಲ.



ಮುಖ್ಯವಾಗಿ ಶ್ರೀಕೃಷ್ಣ ಎಂದ ತಕ್ಷಣ ಪ್ರತಿ ಒಬ್ಬರೂ ಅವರ ರೂಪವನ್ನೇ ಊಹಿಸಿ ಕೊಳ್ಳುತ್ತಾರೆ. ಆ ರೂಪವೇ ಶ್ರೀಕೃಷ್ಣನೆಂದು ಬಗೆಯುತ್ತಾರೆ. ರೂಪ ದೃಷ್ಟಿಯಿಂದ ನೋಡುತ್ತಾ ಹಾಗೆ ಭಾವಿಸುತ್ತಾ ಭಗವದ್ಗೀತೆ ಯನ್ನು ಓದುತ್ತಾರೆ. ಅದರಲ್ಲಿನ ಸನ್ನಿವೇಶಗಳು ಸಂಘಟನೆಗಳನ್ನು, ಹಾಗೇ ಬಾಹ್ಯ ದೃಷ್ಟಿಯಿಂದ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಆದ್ದರಿಂದ ಎಲ್ಲಾ (ಗೊಂದಲ ಮಯ) ಕೆಲವು ವಿಷಯಗಳು ಅರ್ಥವಾಗುವುದಿಲ್ಲ. ಶ್ರೀಕೃಷ್ಣನ ವರ್ತನೆ ಅರ್ಥವಾಗುವುದಿಲ್ಲ.

ಆದರೆ ನೆನಪಿಟ್ಟುಕೊಳ್ಳಿ ಶ್ರೀಕೃಷ್ಣನೆಂದರೆ... ಕಾಣಿಸುವ, ಎಲ್ಲರೂ ಈ ಕಣ್ಣಿನಿಂದ ನೋಡಲಾಗುವ ರೂಪವಲ್ಲ. ಅಂದರೆ ದೇಹ ಅಲ್ಲ. ಅವರು ಕಾಣದ ಅನಂತಶಕ್ತಿಯುತವಾದ, ಸಾವು ಹುಟ್ಟು ಇಲ್ಲದ ಎಲ್ಲಾ ಕಡೆ ವ್ಯಾಪಿಸಿರುವ ಎಲ್ಲರಲ್ಲೂ ಇರುವ 'ಆತ್ಮ' ಎಂದು ತಿಳಿಯಬೇಕು. "ಅಹಮೇತ್ಮಾಗುಡಾಕೇಶ" (ಭ,ಗೀ,10–20) ಅಂದರೇ ಅರ್ಜುನಾ ನಾನು "ಆತ್ಮ" ಎಂದು ಶ್ರೀಕೃಷ್ಣನೇ ಹೇಳಿದನಲ್ಲವೇ? ಆದ್ದರಿಂದ ಯಾರಾದರೇ ಶ್ರೀಕೃಷ್ಣನನ್ನು "ರೂಪದೃಷ್ಟಿ" ಯಿಂದ ಅಲ್ಲದೆ "ಆತ್ಮದೃಷ್ಟಿ" ಯಿಂದ ನೋಡುತ್ತಾರೋ ಅವರಿಗೆ "ಭಾಗವತವಷ್ಟೇ" ಅಲ್ಲ ಶ್ರೀಕೃಷ್ಣ ಬೋಧಿಸಿದ "ಭಗವದ್ಗೀತೆ" ಸಹ ಚೆನ್ನಾಗಿ ಅರ್ಥವಾಗುತ್ತದೆ. ಹಾಗೂ 'ಆತ್ಮದೃಷ್ಟಿ' ಬೇಕೆಂದರೂ, 'ಆತ್ಮಸ್ಥಿತಿ' ಬರಬೇಕೆಂದರೂ ಯಾರಾದರೂ ಖಂಡಿತವಾಗಿ ದ್ಯಾನ ಮಾಡಬೇಕು. ಧ್ಯಾನ ಮಾಡದಿದ್ದರೆ ಭಾಗವತೆ ಆಗಲಿ, ಭಗವದ್ಗೀತೆಯಾಗಲಿ, ಎಂದೂ ಅರ್ಥ ಆಗುವುದಿಲ್ಲ.

# ಶ್ರೀ ಕೃಷ್ಣನು ಕಾರಾಗಾರದಲ್ಲಿ ಜನಿಸುವುದು



ಶ್ರೀಕೃಷ್ಣ ಭಗವಾನನು ದೇವರೆ ವಸುದೇವನಿಗೆ ಅಷ್ಟಾಮ ಗರ್ಭವಾಗಿ ಕಾರಾಗೃಹದಲ್ಲಿ ಜನಿಸಿದನು. ಆಗ ಕಾರಾಗಾರದ ಕೀಲಿ ತನ್ನಷ್ಟಕ್ಕೆ ತಾನೇ ತೆರೆಯಿತು. ಕಾವಲಿರುವವರೆಲ್ಲಾ (ಮೂರ್ಛೆ) ಮತ್ತಿನೊಳಗೆ ಹೋದರು. ಶ್ರೀಕೃಷ್ಣನನ್ನು ಪುಟ್ಟಿಯಲ್ಲಿ ಇಟ್ಟುಕೊಂಡು ವಸುದೇವನು ದ್ವಾರಕೆಗೆ ತೆಗೆದುಕೊಂಡು ಹೋಗುತ್ತಿರುವಾಗ ನದಿ ಎರಡು ಭಾಗವಾಗಿ

ಸೀಳಿಹೋಯಿತು. ಮಳೆ ಬರುತ್ತಿದ್ದರೆ ಏಳು ಹೆಡೆಯ ಹಾವು ತನ್ನ ಹೆಡೆಗಳನ್ನು ಛತ್ರಿಯಂತೆ ಇಟ್ಟು ಶ್ರೀಕೃಷ್ಣನನ್ನು ಮಳೆಯಿಂದ ಕಾಪಾಡಿತು. ಹಾಗೆ ಶ್ರೀಕೃಷ್ಣನು ಸುರಕ್ಷಿತವಾಗಿ ದ್ವಾರಕೆಗೆ ಸೇರಿದನು. ವಸುದೇವನು ತನ್ನ ಕಾರ್ಯವನ್ನು ದಿಗ್ವಿಜಯಾಗಿ ಪೂರ್ತಿಗೊಳಿಸಿದನು.

ಇದರ ಅರ್ಥ ತಿಳಿಯೋಣ, ಮೊದಲು ಶ್ರೀಕೃಷ್ಣನ ಜನ್ಮ ಕಾರಣವೇನು? ಎಂದರೇ ಅವನು ಲೋಕದಲ್ಲಿ ಧರ್ಮವನ್ನು ಸ್ಥಾಪಿಸಲು ಭೂಮಿ ಮೇಲೆ ಅವತರಿಸಿದನು. ಅಂತಹ ಮಹತ್ತರ ಕಾರ್ಯಕ್ಕಾಗಿ ಅವನು ಜನಿಸಿದ್ದನು. ಆದ್ದರಿಂದ ಸಮಸ್ತ ಪ್ರಕೃತಿ, ಪ್ರಕೃತಿಯಲ್ಲಿನ ದೇವತೆಗಳು ಅವರಿಗೆ ಸಹಕರಿಸಿದರು. ಕಾಣಿಸದ ಒಬ್ಬ ದೇವತೆ ತಾಳ ತೆರೆದರೆ ಮತ್ತೊಬ್ಬ ದೇವತೆ ಕಾವಲುಗಾರನು ನಿದ್ರೆಗೆ ಜಾರುವಂತೆ ಮಾಡಿದಳು ಹಾಗೆ ಪ್ರಕೃತಿಯ ಭಾಗವಾದ ಯಮುನಾ ನದಿ ಎರಡಾಗಿ ಸೀಳಿಕೊಂಡು ದಾರಿ ಮಾಡಿಕೊಟ್ಟಿದೆ. ಮಳೆಯ ಕಾರಣದಿಂದ ಮತ್ತೊಬ್ಬ ದೇವತೆ ಏಳು ಹೆಡೆಯ ಹಾವಿನ ರೂಪದಲ್ಲಿ ಛತ್ರಿ ಹಿಡಿದು ಅವನಿಗೆ ರಕ್ಷಣೆ ನೀಡಿದೆ. ಹಾಗೇ ವಸುದೇವನ ಕಾರ್ಯ ನಿರ್ವಿಘ್ನವಾಗಿ ಪೂರ್ತಿ ಆಯಿತು.

ಈ ಸನ್ನಿವೇಶದ ಮೂಲಕ ನಾವು ತಿಳಿಯಬೇಕಾದ ಸಂದೇಶವೇನೆಂದರೇ ಯಾರು ಧರ್ಮವನ್ನು ರಕ್ಷಿಸುತ್ತಾರೊ! ಧರ್ಮಾಚರಣೆ ಮಾಡುತ್ತಾರೊ! ಧರ್ಮವನ್ನು ರಕ್ಷಿಸಲು ಶ್ರಮ ಪಡುತ್ತಾರೋ! ಹಾಗೇ ಲೋಕಕಲ್ಯಾಣಕರವಾದ ಕೆಲಸಗಳು ಮಾಡುತ್ತಾರೋ! ಅವರಿಗೆ ಪ್ರಕೃತಿ, ಪ್ರಕೃತಿಯಲ್ಲಿನ ದೇವತೆಗಳು ಸದಾ ಸಹಕರಿಸುತ್ತಾರೆ. ರಕ್ಷಿಸುತ್ತಿರುತ್ತಾರೆ. ಎಲ್ಲಾ ವಿಧದಲ್ಲೂ ಅವರಿಗೆ ಸಹಾಯ ಮಾಡುತ್ತಾರೆಂದು ಈ ಸನ್ನಿವೇಶದ ಅಂತರಾರ್ಥ. ಆದ್ದರಿಂದ ನೀವು ಸಹ ಲೋಕಕಲ್ಯಾಣಕರವಾದ ಕೆಲಸಗಳು ಮಾಡಿರಿ... ಧರ್ಮವನ್ನು ಕಾಪಾಡಿರಿ... ಧರ್ಮಯುಕ್ತವಾದ ಕೆಲಸಗಳು ಮಾಡಿರಿ... ಲೋಕ ವಿರುದ್ಧವಾದ, ಧರ್ಮ ವಿರುದ್ಧವಾದ ಕೆಲಸಗಳು ಮಾಡಬೇಡಿ ಎಂದು ಹೇಳುವುದೇ ಈ ಸನ್ನಿವೇಶದ ಸಂದೇಶವಾಗಿದೆ.

ತಿಳಿಯಿರಿ ನಾವು ಆಲೋಚಿಸುವ ದೇವರು, ದೇವತೆಗಳು ಇದ್ದಾರೆ. ಇವರು ನಾವು ಕೊಡುವ ತೆಂಗಿನಕಾಯಿ, ಬಾಳೆ ಹಣ್ಣುಗಳಿಗಾಗಿ ಇಲ್ಲ, ಅವರೆಲ್ಲಾ ಅವುಗಳನ್ನು ಆಶಿಸುವವರಲ್ಲ. ದೇಹವಿಲ್ಲದವರು ಅವನ್ನು ಏನು ಮಾಡಿಕೊಳ್ಳುತ್ತಾರೆ? ಆದ್ದರಿಂದ ಅವರು ಅಂತಹವನ್ನು ಆಶಿಸುವುದಿಲ್ಲವೆಂದು ತಿಳಿಯಬೇಕು. ಮತ್ತೆ ಅವರು ಯಾಕಿದ್ದಂತೆ? ಎಂದರೇ ಯಾರು ಲೋಕ ಕಲ್ಯಾಣಕರವಾದ ಕೆಲಸಗಳು ಮಾಡುತ್ತಾರೋ! ಲೋಕದಲ್ಲಿ ಧರ್ಮವನ್ನು ಕಾಪಾಡುವ ಪ್ರಯತ್ನ ಮಾಡುತ್ತಾರೋ! ಅವರೆಲ್ಲರಿಗೆ ಸದಾಕಾಲ ಸಹಾಯ ಮಾಡಲು ಇದ್ದಾರೆ.

ಖಂಡಿತವಾಗಿ ಅಂತವರಿಗೆ ಅವರು ಅದೃಶ್ಯ ರೂಪದಲ್ಲಿ ಸಹಾಯ ಮಾಡುತ್ತಾರೆಂದು ತಿಳಿಯಪಡಿಸುವುದೇ ಈ ಸನ್ನಿವೇಶದ ಅಂತರಾರ್ಥ. ಅಷ್ಟೇ ಅಲ್ಲ ಲೋಕಕಲ್ಯಾಣಕರವಾದ ಕೆಲಸಗಳು ಮಾಡುವವರಿಗೆ ಸೃಷ್ಟಿಯಿಂದ, ಪ್ರಕೃತಿಯಿಂದ ಸಹ ಸದಾ ಸಹಾಯ ಸಿಗುತ್ತದೆಂದು ಹೇಳುವುದೇ ಈ ಸನ್ನಿವೇಶದ ಸಂದೇಶ.

# ಶ್ರೀಕೃಷ್ಣನಿಂದ ದುಷ್ಟ ಶಿಕ್ಷಣೆ – ಶಿಷ್ಟ ರಕ್ಷಣೆ



ಭಾಗವತದಲ್ಲಿನ ತುಂಬಾ ಸನ್ನಿವೇಶಗಳಲ್ಲಿ ರಾಕ್ಷಸರನ್ನು, ದುಷ್ಟರನ್ನು, ಶ್ರೀಕೃಷ್ಣ ಭಗವಾನನು ಶಿಕ್ಷಿಸುವುದು, ಸಂಹರಿಸುವುದು, ಕಾಣಿಸುತ್ತದೆ. ಹಾಗೆಯೇ ಅಲ್ಪರನ್ನು, (ಬಲಹೀನರನ್ನು), ನಿಸ್ಸಾಹಾಯಕರನ್ನು, ಸನ್ಮಾರ್ಗದಲ್ಲಿ ಇರುವವರನ್ನು ರಕ್ಷಿಸುವುದು ಕಾಣಿಸುತ್ತದೆ.

ಇಲ್ಲಿ ರಾಕ್ಷಸರು ಎಂದ ತಕ್ಷಣ ಅದೊಂದು ಪ್ರತ್ಯೇಕವಾದ ಜಾತಿ ಎಂದು ತಿಳಿಯಬಾರದು, ಅವರೂ ಮಾನವರೇ, ಯಾರಾದರೆ ಅಂತಹ ಕೆಲಸಗಳು ಮಾಡುತ್ತಾರೋ ಅವರನ್ನು ರಾಕ್ಷಸರೆನ್ನುತ್ತೇವೆ. ರಾಕ್ಷಸರ ಗುಣ ಬೇರೆಯವರನ್ನು ಹಿಂಸಿಸಿ, ಅವರು ಹಿಂಸೆ ಪಡುತ್ತಿದ್ದರೆ ಇವರು ಆನಂದಿಸುತ್ತಿರುತ್ತಾರೆ. ಅಂದರೆ ಬೇರೆಯವರ ಹಿಂಸೆಯಲ್ಲಿ ಆನಂದ ಕಾಣುವವರನ್ನು ರಾಕ್ಷಸರೆನ್ನುತ್ತಾರೆ. ಅವರನ್ನೇ ಪ್ರಸ್ತುತ ನಾವು "ಸ್ಯಾಡಿಸ್ಟರು" (saddist) ಎನ್ನುತ್ತಿದ್ದೇವೆ. ಅಂದರೇ ಇತರರ ವಿಷಾದದಿಂದ ವಿನೋಧಿಸುವವರೆಲ್ಲ ರಾಕ್ಷಸರೆ. ಅಷ್ಟೇ ಅಲ್ಲ ರಾಕ್ಷಸರಿಗೆ ರಕ್ತ ಮಾಂಸಗಳೆಂದರೇ ತುಂಬಾ ಇಷ್ಟ. ಮಾಂಸಹಾರವೆಂದರೆ ರಾಕ್ಷಸರು ತುಂಬಾ ಇಷ್ಟಪಡುತ್ತಾರೆ.

ಭಾಗವತದಲ್ಲಿನ ಸನ್ನಿವೇಶಗಳ ಮೂಲಕ ದೇವರು ರಾಕ್ಷಸರನ್ನು ಶಿಕ್ಷಿಸುತ್ತಾನೆಂದು, ಅಷ್ಟೇ ಅಲ್ಲ ಒಂದೊಂದು ಸಲ ಸಂಹರಿಸಿ ಕಠಿಣವಾಗಿ ಶಿಕ್ಷಿಸುತ್ತಾನೆಂದು, ನಾವು

ತಿಳಿಯಬಹುದು. ಅಂದರೆ ಯಾರಾದರೆ ಮೂಕ ಜೀವಿಗಳನ್ನು ಕ್ರೂರವಾಗಿ ಹಿಂಸಿಸಿ ಸಾಯಿಸುತ್ತಾರೋ! ಹಾಗೆ ಅವುಗಳ ಮಾಂಸ ತಿಂದು ಹಿಂಸೆಗೆ ಕಾರಣರಾಗುತ್ತಾರೋ! ಅಂತಹವರು ಭಗವಂತನಿಂದ ಕಠಿಣವಾಗಿ ಶಿಕ್ಷಿಸಲ್ಪಡುತ್ತಾರೆಂದು ಹೇಳುವುದೇ, ಶ್ರೀಕೃಷ್ಣನು ರಾಕ್ಷಸರನ್ನು ಸಂಹರಿಸುವ ಸನ್ನಿವೇಶಗಳ ಅರ್ಥ.

ಆದರೆ ಲೋಕದಲ್ಲಿ ಮಾನವರಿಗಿರುವ ಮೂಢನಂಬಿಕೆ ಏನೆಂದರೆ ಅವರು ಹೇಗೆ ಜೀವಿಸಿದರೂ, ಏನೇ ಮಾಡಿದರೂ ಪರವಾಗಿಲ್ಲ. ಶ್ರೀಕೃಷ್ಣ ಭಗವಾನನ ಗೊಂಬೆ ಇಟ್ಟು ಪೂಜಿಸಿದರೆ, ಭಜನೆಗಳು ಮಾಡಿದರೆ ಸಾಕು ಅವನು ರಕ್ಷಿಸುತ್ತಾನೆಂದು ಭಾವಿಸುತ್ತಾರೆ. ಅದಕ್ಕೆ ಮನೆಯ ಹತ್ತಿರ ಜೀವಹಿಂಸೆ ಮಾಡುತ್ತಾರೆ. ಗುಡಿಗೆ ಹೋಗಿ ಪೂಜೆಗಳು ಮಾಡುತ್ತಾರೆ. ಆದರೆ ಭಾಗವತ ಸನ್ನಿವೇಶಗಳಿಂದ ಇಂತಹವರು ರಕ್ಷಿಸಲ್ಪಡುವುದಿಲ್ಲ, ಖಂಡಿತವಾಗಿ ಶಿಕ್ಷಿಸಲ್ಪಡುತ್ತಾರೆಂದು ತಿಳಿಯಪಡಿಸುವುದೇ ರಾಕ್ಷಸರನ್ನು ಶಿಕ್ಷಿಸುವ ಸನ್ನಿವೇಶಗಳ ಅರ್ಥ.

ಹಾಗೆ ರಾಕ್ಷಸರು ಎಷ್ಟೋ ಮಾಯಾ ರೂಪಗಳಿಂದ ಬರುವುದು, ಶ್ರೀಕೃಷ್ಣ ಭಗವಾನನು ಅದನ್ನು ಕಂಡುಹಿಡಿದು ಸಂಹರಿಸುವುದು ಸಹ ನಾವು ಆ ಸನ್ನಿವೇಶಗಳಲ್ಲಿ ನೋಡುತ್ತಿದ್ದೇವೆ.

ಹಾಗೆ ಪೂತನಿ, ಶಕಟಾಸುರರಂತಹ ರಾಕ್ಷಸರು ಮಾರು ವೇಷಗಳಲ್ಲಿ ಮಾಯಾ ರೂಪಗಳಲ್ಲಿ ಬಂದರೂ ಶ್ರೀಕೃಷ್ಣ ಭಗವಾನನು ಅವರನ್ನು ಕಂಡುಹಿಡಿದು ಅವರನ್ನು ಸಂಹರಿಸಿದನು. ಅಂದರೇ ಇದರ ಅರ್ಥ, ರಾಕ್ಷಸ ಕಾರ್ಯಗಳು ಮಾಡುವವರು ಎಷ್ಟೇ ಮಾಯೆ ಮಾಡಿದರೂ, ಮೋಸ ಮಾಡಿದರೂ, ಎಷ್ಟು ಬುದ್ಧಿವಂತಿಕೆಯನ್ನು ಉಪಯೋಗಿಸಿದರೂ ಅವರು ತಪ್ಪಿಸಿಕೋಳ್ಳಲಾರರು. ಅವರೆಲ್ಲಾ ಭಗವಂತನ ಶಿಕ್ಷೆಗೆ ಪಾತ್ರರಾಗಲೇಬೇಕೆಂದು ತಿಳಿಯುವುದೇ ಈ ಸನ್ನಿವೇಶಗಳ ಸಂದೇಶ. ಇದರಿಂದ ತಿಳಿಯುವುದೆನೆಂದರೆ ಮನೆ ಹತ್ತಿರ ಹಿಂಸೆ ಮಾಡಿ, ಭಕ್ತನಂತೆ ವೇಷ ಧರಿಸಿ, ಗುಡಿಗೆ ಬಂದರೂ ಭಗವಾನನು ಕಂಡುಹಿಡಿಯುತ್ತಾನೆಂದು ತಿಳಿಯಬೇಕು. ಅವನಿಂದ ತಪ್ಪಿಸಿಕೊಳ್ಳಲಾರರೆಂದು ತಿಳಿಸುಬೇಕು. ಆದ್ದರಿಂದ ದೇವರ ರಕ್ಷಣೆ ಬೇಕೆಂದರೆ ಹಿಂಸೆ ಮಾಡಬಾರದೆಂದು ತಿಳಿಯಬೇಕು.

ಆದ್ದರಿಂದ ಯಾರಾದರೂ ಈ ಲೋಕದಲ್ಲಿ ಬಲಹೀನರಾದವರನ್ನು ಆಗಲೀ, ಬುದ್ಧಿಮಾಂದ್ಯರನ್ನಾಗಲೀ, ಅಧಿಕಾರವಿಲ್ಲದವರನ್ನಾಗಲೀ, ನಿಸ್ಸಾಹಾಯಕರನ್ನಾಗಲೀ, ಕೊನೆಗೆ ಏನೂ ಮಾಡದ ಜೀವಿಗಳನ್ನಾಗಲೀ, ಹಿಂಸಿಸಿದರೂ, ಕಷ್ಟಪಡಿಸಿದರೂ, ನಷ್ಟಪಡಿಸಿದರೂ, ಬಾಧಿಸಿದರೂ, ಅವರು ಶಿಕ್ಷಿಸಲ್ಪಡುತ್ತಾರೆಂದೇ ಈ ಸನ್ನಿವೇಶಗಳ ಸಂದೇಶ. ಹಾಗೇ ಹಿಂಸಿಸಲ್ಪಡುವವರು ಸ್ತ್ರೀಯರಾಗಬಹುದು, ಪುರುಷರಾಗಬಹುದು, ಚಿಕ್ಕಮಕ್ಕಳಾಗಬಹುದು, ವೃದ್ಧರಾಗಬಹುದು, ಕೊನೆಗೆ ಜೀವಿಗಳು, ಪಕ್ಷಿಗಳು ಸಹ ಆಗಬಹುದು. ಕಾರಣ ಎಲ್ಲಾ ಭಗವಂತನ ಸೃಷ್ಟಿಯಲ್ಲಿಯೇ ಭಗವಂತನ ರೂಪಗಳೇ ಆಗಿರುವುದರಿಂದ.

ಇದರಿಂದ ತಿಳಿಯುವುದೇನೆಂದರೆ ನಾವು ಯಾರನ್ನು ಬಾಧಿಸಬಾರದು, ಏನನ್ನು ಹಿಂಸಿಸಬಾರದು, ರಾಕ್ಷಸರಂತೆ ವರ್ತಿಸಬಾರದು, ದುಷ್ಟಕಾರ್ಯಗಳು ಮಾಡಬಾರದೆಂದು ತಿಳಿಯಬೇಕು. ಇದು ತಿಳಿಯದೇ ಸೃಷ್ಟಿ ವಿರುದ್ಧವಾದ ಕೆಲಸಗಳು ಮಾಡಿದರೆ ಅವುಗಳ

ಫಲಿತ ಅನುಭವಿಸಬೇಕಾಗಿ ಬರುತ್ತದೆಂದು, ಕೊನೆಗೆ ಕಷ್ಟ, ನಷ್ಟಕ್ಕೆ ಗುರಿಯಾಗಬೇಕಾಗುತ್ತದೆಂದು ಈ ಸನ್ನಿವೇಶಗಳಲ್ಲಿನ ಸಂದೇಶ.

ಹಾಗೇ ಈ ಸೃಷ್ಟಿಯಲ್ಲಿ ಒಳ್ಳೆಯವರು, ಸನ್ಮಾರ್ಗರೂ, ಯಾವತ್ತು ರಕ್ಷಿಸಲ್ಪಡುತ್ತಾರೆಂದು ತಿಳಿಯಬೇಕು. ತುಂಬಾ ಜನ ತಮಗೆ ಯಾರಿಂದಾದರೂ ಕೆಟ್ಟದ್ದಾದರೆ ನಮಗೆ ಅನ್ಯಾಯವಾಯಿತೆಂದು ಹೇಳುತ್ತಾರೆ. ಒಂದೊಂದು ಸಹ ದೈವವನ್ನು ಸಹ ನಿಂಧಿಸುತ್ತಾರೆ. ಆದರೆ ಈ ಸೃಷ್ಟಿಯಲ್ಲಿ ಸನ್ಮಾರ್ಗರು, ಧರ್ಮಯುಕ್ತವಾಗಿ ಜೀವಿಸುವವರು ರಕ್ಷಿಸಲ್ಪಡುತ್ತಾರೆಂದು ಭಾಗವತದಲ್ಲಿರುವ ಎಷ್ಟೋ ಸನ್ನಿವೇಶಗಳ ಮೂಲಕ ನಾವು ತಿಳಿಯಬಹುದು. ಆದ್ದರಿಂದ ಯಾರಾದರೂ ಸರಿ ದುಷ್ಟತ್ವವನ್ನು, ರಾಕ್ಷಸತ್ವವನ್ನು, ಬಿಡಬೇಕೆಂದು, ಸನ್ಮಾರ್ಗವನ್ನು, ಧರ್ಮಮಾರ್ಗವನ್ನು ಅನುಸರಿಸಬೇಕೆಂದು ತಿಳಿಸುವುದೇ ಈ ಸನ್ನಿವೇಶಗಳಲ್ಲಿನ ಸಂದೇಶ.

ಅಷ್ಟೇ ಅಲ್ಲ ರಕ್ಷಿಸುವವನಿಲ್ಲ – ನಮಗೆ ರಕ್ಷಣೆಯಿಲ್ಲ ಎಂದು ತಿಳಿಯುವ ಅವಶ್ಯಕತೆಯಿಲ್ಲ. ಈ ಸೃಷ್ಟಿಯಲ್ಲಿ ಶ್ರೇಷ್ಠರು ಎಂದರೇ ಒಳ್ಳೆಯವರು ಸದಾ ರಕ್ಷಿಸಲ್ಪಡುತ್ತಾರೆ. ದುಷ್ಟರೂ ಸದಾ ಶಿಕ್ಷಿಸಲ್ಪಡುತ್ತಾರೆಂದು ಶ್ರೀಕೃಷ್ಣ ಭಗವಾನನು ಭಗವದ್ಗೀತೆಯಲ್ಲಿ ಈ ಶ್ಲೋಕದ ಮೂಲಕ ಬಹಳ ಸ್ಪಷ್ಟವಾಗಿ ಹೇಳಲಾಗಿದೆ.

**ಶ್ಲೋಕ॥ ಪರಿತ್ರಾಣಾಯ ಸಾಧೂನಾಂ, ವಿನಾಶಾಯಚದುಷ್ಕೃತಾಂ**
**ಧರ್ಮಸಂಸ್ಥಾಪನಾಥಾಯ ಸಂಭವಾಮಿ ಯುಗೇ! ಯುಗೇ!**

**ಭಾವಾರ್ಥ :–** ಸಾಧುಗಳನ್ನು ರಕ್ಷಿಸಲು, ದುಷ್ಟರನ್ನು ಶಿಕ್ಷಿಸಲು, ಹಾಗೇ ಮಾಡುತ್ತಾ ಲೋಕದಲ್ಲಿ ಧರ್ಮವನ್ನು ಸ್ಥಾಪಿಸಲು ಮಧ್ಯೆ ಮಧ್ಯೆ ನಾನು ಅವತರಿಸುತ್ತೇನೆ.

ಇದರ ಮೂಲಕ ನಾವು ರಕ್ಷಿಸಲ್ಪಡುವುದು ಪೂಜೆ, ಆರಾಧನೆಗಳ ಮೂಲಕ ಅಲ್ಲ, ನಮ್ಮ ವರ್ತನೆ ನಮ್ಮನ್ನು ರಕ್ಷಿಸುತ್ತದೆಂದು ತಿಳಿಯಬೇಕು. ಬಲಹೀನರನ್ನು ಹಿಂಸಿಸುತ್ತಾ, ಜೀವಿಗಳನ್ನು ಭಕ್ಷಿಸುತ್ತಾ, ರಾಕ್ಷಸತ್ವದಿಂದ ವರ್ತಿಸಿದರೆ, ಯಾರಾದರೂ ದೇವರಿಂದ ಶಿಕ್ಷಿಸಲ್ಪಡುತ್ತಾರೆ, ಅಂದರೆ ಕಷ್ಟಗಳ ಪಾಲಾಗುತ್ತಾರೆ ಎನ್ನುವ ಈ ಸನ್ನಿವೇಶಗಳಲ್ಲಿನ ಸಂದೇಶ.





# ಶ್ರೀಕೃಷ್ಣನು ಬೆಣ್ಣೆ, ಹಾಲು, ಮೊಸರು, ಕದಿಯುವುದು



ಶ್ರೀಕೃಷ್ಣನು ಬಾಲ್ಯದಲ್ಲಿ ಸ್ನೇಹಿತರೊಡನೆ ಕೂಡಿ ಎಲ್ಲರ ಮನೆಯಲ್ಲಿ ಬೆಣ್ಣೆ, ಹಾಲು, ಮೊಸರು, ಕದಿಯುತ್ತಿದ್ದನೆಂದು ಅವು ಹಂಚಿಕೊಳ್ಳುತ್ತಾ ಅವರೊಂದಿಗೆ ಗಲಾಟೆ ಮಾಡುತ್ತಿದ್ದನೆಂದು ಭಾಗವತದಲ್ಲಿ ಒಂದು ಸನ್ನಿವೇಶದ ಮೂಲಕ ನಾವು ತಿಳಿದಿದ್ದೇವೆ. ಈ ಸನ್ನಿವೇಶಕ್ಕೆ ಸಹ ಅಂತರಾರ್ಥ ಇದೆ.

ಹಾಲು, ಮೊಸರು, ಬೆಣ್ಣೆ, ತುಪ್ಪದಂತಹವು ಹಸುವಿನ ಹಾಲಿನಿಂದ ಲಭಿಸುವ ಪದಾರ್ಥಗಳು, ಇವೆಲ್ಲಾ ಮಾನವರಿಗೆ ಎಷ್ಟೋ ಪ್ರಶಸ್ತವಾದ ಶುದ್ಧ ಸಾತ್ವಿಕವಾದ ಆಹಾರ, ಇಂತಹ ಆಹಾರ ಯಾರಿಗೇ ಆಗಲಿ ಬುದ್ಧಿವಂತಿಕೆಯನ್ನು ಬೆಳೆಸುತ್ತದೆ. ಮನಸ್ಸನ್ನು ಶುದ್ಧ ಮಾಡುತ್ತದೆ. ಬುದ್ಧಿಯನ್ನು ವಿಕಸಿಸುವಂತೆ ಮಾಡುತ್ತದೆ. ಜ್ಞಾನವನ್ನು ಬೆಳೆಸುತ್ತದೆ. ಇನ್ನೂ ಎಷ್ಟೋ ವಿಧದ ಲಾಭಗಳು ಬರುವಂತೆ ಮಾಡುತ್ತದೆ.

ಶ್ರೀಕೃಷ್ಣನು ಬೆಣ್ಣೆ, ಹಾಲು, ಮೊಸರು, ಕದಿಯುತ್ತಿದ್ದನೆಂದರೆ ಅವನು ಅವುಗಳನ್ನು ಇಷ್ಟ ಪಡುತ್ತಿದ್ದನೆಂದು ಅರ್ಥ. ಕದಿಯುವಷ್ಟು ಇಷ್ಟವೆಂದು ಅದರ ಅರ್ಥ. ಬೆಣ್ಣೆ ಕಳ್ಳ ಎಂದರೆ ಬೆಣ್ಣೆಯನ್ನು ಅಷ್ಟು ಇಷ್ಟಪಡುತ್ತಿದ್ದನೆಂದು ತಿಳಿಯಬೇಕು.

ನೋಡಿ ಮಕ್ಕಳು ಯಾರಿಗೇ ಆಗಲಿ ಯಾವ ಸ್ವೀಟ್ ಇಷ್ಟವಾದರೂ ಇಷ್ಟಪಟ್ಟರೂ ಇತರರಿಗೆ ತಿಳಿಯದೆ ತೆಗೆದುಕೊಂಡು ತಿನ್ನುತ್ತಿರುತ್ತಾರೆ. ಕಾರಣ ಅವರಿಗೆ ಅದು ಅಷ್ಟು ಇಷ್ಟವಾದ್ದರಿಂದ. ಅಷ್ಟೇ ಹೊರೆತು ನಿಜವಾಗಿ ಕದಿಯಬೇಕಾದ ಅವಶ್ಯಕತೆ ಶ್ರೀಕೃಷ್ಣನಿಗೆ ಇದೆಯೇ? ಎಂದರೆ ಇಲ್ಲ. ಕಾರಣ ಅವನ ಮನೆಯಲ್ಲಿಯೇ ತುಂಬಾ ಬೆಣ್ಣೆ ಇತ್ತು. ಬೆಣ್ಣೆಗೆ, ಹಾಲಿಗೆ, ಮೊಸರಿಗೆ, ಕೊರತೆಯಿಲ್ಲ. ಅವನು ತಿನ್ನುತ್ತೇನೆ ಎಂದರೆ ತಾಯಿ ಯಶೋಧಾ ಬೇಡ ಎನ್ನುತ್ತಿದ್ದಳೇ? ಪ್ರೇಮಪೂರ್ವಕವಾಗಿ ಎಷ್ಟು ಬೇಕೆಂದರೆ ಅಷ್ಟು ಕೊಡುತ್ತಾಳೆ. ಹಾಗಿರುವಾಗ ಎಲ್ಲರ ಮನೆಯಲ್ಲಿರುವುದನ್ನು ಕದಿಯಬೇಕಾದ ಅವಶ್ಯಕತೆ ಅವನಿಗೆ ಏಕೆ ಇರುತ್ತದೆ? ಅವನ ಹತ್ತಿರ ಇಲ್ಲದಿದ್ದರೆ ಮಾತ್ರ ಯಾರಾದರೂ ಇತರರಿಂದ ಕದಿಯುತ್ತಾರೆ.

ಆದ್ದರಿಂದ ಬೆಣ್ಣೆ, ಹಾಲು, ಮೊಸರು, ಕದಿಯುವವರು ಎಂದರೆ ಅವುಗಳನ್ನು ಅಷ್ಟು ಇಷ್ಟಪಡುವವರು ಎಂದರ್ಥ. ಈ ಸನ್ನಿವೇಶದಲ್ಲಿನ ಸಂದೇಶ ಗ್ರಹಿಸಿದರೆ ನಾವು ಸಹ ಶ್ರೀಕೃಷ್ಣನಲ್ಲಿನ ಅಂತಹ ಆಹಾರ ಇಷ್ಟಪಡುತ್ತೇವೆ. ಅಂತಹ ಶುದ್ಧ ಸಾತ್ವಿಕವಾದ ಆಹಾರವನ್ನೇ ತೆಗೆದುಕೋಳ್ಳುತ್ತೇವೆ.

ಆದರೆ ಈ ಸನ್ನಿವೇಶದ ಸಂದೇಶ ಅರ್ಥಮಾಡಿಕೋಳ್ಳದೇ ಪ್ರಸ್ತೂತ ಲೋಕದಲ್ಲಿ ಪ್ರತಿಯೊಬ್ಬರೂ ತಮೋಗುಣ ಪ್ರಧಾನವಾದ, ರಜೋಗುಣ ಪ್ರಧಾನವಾದ ಆಹಾರಗಳು ಅಂದರೆ ತಾಮಸಿಕ, ರಾಜಸಿಕ, ಆಹಾರಗಳು ತೆಗೆದುಕೋಳ್ಳುತ್ತಿದ್ದಾರೆ. ಇಷ್ಟಪಡುತ್ತಿದ್ದಾರೆ. ಅಷ್ಟೇ ಹೊರತು ಸಾತ್ವಿಕವಾದ ಆಹಾರಗಳಿಗೆ ಯಾರೂ ಪ್ರಾಮುಖ್ಯತೆ ಕೊಡುತ್ತಿಲ್ಲ. ಮಾನವರು ಇನ್ನೂ ಎಂತಹ ಸ್ಥಿತಿಯಲ್ಲಿದ್ದಾರೆಂದರೆ ಎಲ್ಲದಕ್ಕಿಂತ ನೀಚವಾದ 'ಮಾಂಸ'ವನ್ನು ಅಂದರೆ ಮೃತಾಹಾರವನ್ನು ಇಷ್ಟಪಡುತ್ತಿದ್ದಾರೆ. ನಿತ್ಯ ಭಾಜಿಸುತ್ತಿದ್ದಾರೆ.

ಆದರೆ ನಿಜವಾಗಲೂ ಈ ಸನ್ನಿವೇಶದಲ್ಲಿ ಸಂದೇಶ ಅರ್ಥಮಾಡಿಕೊಂಡರೇ ಯಾರಾದರೂ ಮಾಂಸಹಾರವನ್ನು ಇಷ್ಟಪಡುವುದಿಲ್ಲ. ಸಾತ್ವಿಕ ಆಹಾರವನ್ನೇ ಇಷ್ಟಪಡುತ್ತಾರೆ. ಶ್ರೀಕೃಷ್ಣನನ್ನು ಆರಾಧಿಸುವವರಾದರೆ ಇದು ಅರ್ಥಮಾಡಿಕೊಂಡು ಶ್ರೀಕೃಷ್ಣನು ಇಷ್ಟಪಡುವ ಆಹಾರವನ್ನು ತಾವು ಇಷ್ಟಪಡುತ್ತಾರೆ. ಆದ್ದರಿಂದ ಪ್ರತಿ ಸನ್ನಿವೇಶದಲ್ಲಿನ ಅಂತರಾರ್ಥ ತಿಳಿಯಬೇಕು. ಅಷ್ಟೇ ಅಲ್ಲ ಶ್ರೀಕೃಷ್ಣನು ಪ್ರತ್ಯೇಕವಾಗಿ ಹಸುಗಳನ್ನು ಇಷ್ಟಪಡಲು, ಹಸುಗಳಿಂದ ಬಂದ ಆಹಾರ ಇಷ್ಟಪಡಲು ಕಾರಣ ಇಲ್ಲದೇ ಇಲ್ಲ. ಏಕೆಂದರೆ ಜೀವಿಗಳು ಭಗವತ್ ಸ್ವರೂಪಗಳೇ, ಎಲ್ಲಾ ಜೀವಿಗಳಿಂದ ಪ್ರತ್ಯಕ್ಷವಾಗಿ ಆಗಲೀ, ಪರೋಕ್ಷವಾಗಿ ಆಗಲೀ,

ಮಾನವರಿಗೆ ಯಾವುದೋ ಒಂದು ತರದ ಉಪಕಾರ, ಲಾಭ ಇದೆ. ಆದರೆ ಎಲ್ಲದಕ್ಕಿಂತ ಹಸುವಿಗೆ ಒಂದು ಪ್ರತ್ಯೇಕ ಸ್ಥಾನವಿದೆ. ಅದಕ್ಕೆ ಹಿಂದೂಗಳು ಹಸುವನ್ನು ಆರಾಧಿಸುತ್ತಾರೆ. ದೈವಕ್ಕೆ ಸಮಾನವೆಂದು ಭಾವಿಸುತ್ತಾರೆ. ಕಾರಣ ಹಸುವಿನಿಂದ ಏನೇ ಲಭಿಸಿದರೂ ಅದು ಮಾವನರಿಗೆ ಉಪಕಾರಿಯೇ. ಹಾಲನ್ನೇ ತೆಗೆದುಕೋಳ್ಳಿ, ಹಾಲಿನಿಂದ ಎಷ್ಟೋ ಪದಾರ್ಥಗಳು ಲಭಿಸುತ್ತವೆ. ಅಷ್ಟೇ ಅಲ್ಲ ತಾಯಿ ಹಾಲು ಸರಿಯಾಗದಿದ್ದರೆ ಆ ಮಗುವಿಗೆ ಹಸುವಿನ ಹಾಲೇ ಶ್ರೇಷ್ಠವೆಂದು ಹಸುವಿನ ಹಾಲನ್ನು ಕುಡಿಸುತ್ತಾರೆ. ಬೇಸಿಗೆಯಲ್ಲಿ ಹಾಲಿನಿಂದ ಲಭಿಸುವ ಮೊಸರು ಎಷ್ಟೋ ತಂಪು ಮಾಡುತ್ತದೆ? ತಂಪನ್ನು ನೀಡುತ್ತದೆ?

ಅಷ್ಟೇ ಅಲ್ಲ ಗೋಮೂತ್ರದಲ್ಲಿ ಎಷ್ಟೋ ಔಷಧೀಯ ಗುಣಗಳಿವೆ. ಹಸುವಿನ ಎಂಡೆಯನ್ನು ಎಂಡೆನೀರಾಗಿ ಮನೆ ಮುಂದೆ ಚಿಮ್ಮಿಸುತ್ತಾರೆ. ಸ್ವಚ್ಛವಾಗಿರುವುದಕ್ಕೋಸ್ಕರ ಮನೆಯನ್ನು ಸಾರಿಸುತ್ತಾರೆ. ಕುಳ್ಳನ್ನು ಮಾಡಿ ಅಡುಗೆಗೆ ಉಪಯೋಗಿಸಿಕೋಳ್ಳುತ್ತಾರೆ. ಹಾಗೇ ಹಸುವಿಗೆ ನಾವು ಎಷ್ಟು ಆಹಾರ ಕೊಟ್ಟರೂ ಎಲ್ಲವೂ ಉಪಯೋಗವಾಗುವವೇ ಕೊಡುತ್ತದೆ. ವ್ಯರ್ಥವೆನ್ನುವುದೇ ಇರುವುದಿಲ್ಲ. ಇನ್ನೂ ಯಾವ ಜೀವಿಯನ್ನು ನೋಡಿದರೂ ಎಷ್ಟೋ ಸ್ವಲ್ಪ, ಯಾವುದೋ ಒಂದು ವ್ಯರ್ಥ ಇರುತ್ತದೆ. ಆದರೆ ಹಸುವಿನ ವಿಷಯದಲ್ಲಿ ಹಾಗಲ್ಲ. ಆದ್ದರಿಂದ ಹಸು ಶ್ರೇಷ್ಠ.

ಆದ್ದರಿಂದ ಅಂತಹ ಹಸುವಿನಿಂದ ಬಂದ ಹಾಲು, ಹಾಲಿನ ಪದಾರ್ಥಗಳ ಒಂದು ವಿಶಿಷ್ಠತೆಯಂದು ತಿಳಿಯಿರಿ. ಅಂತಹ ಸಾತ್ವಿಕವಾದ ಆಹಾರವನ್ನು ಇಷ್ಟಪಡಿ. ಶುದ್ಧ ಸಾತ್ವಿಕವಾದ ಶಾಕಾಹಾರವನ್ನು ತೆಗೆದುಕೋಳ್ಳಿ. ಮಾಂಸಹಾರವನ್ನು ಬಿಟ್ಟುಬಿಡಿ, ಇದೇ ಈ ಸನ್ನಿವೇಶದ ಅರ್ಥ. ಆದ್ದರಿಂದ ಶ್ರೀಕೃಷ್ಣನಂತೆ "ಇಷ್ಟಪಡಬೇಕಾದದ್ದು ಹಸುವಿನ ಹಾಲನ್ನು, ಹಾಲಿನ ಪದಾರ್ಥಗಳನ್ನೇ ಹೊರತು, ಹಸುವಿನ ರಕ್ತ ಮಾಂಸಗಳನ್ನಲ್ಲ" ಇದೇ ಈ ಸನ್ನಿವೇಶದಲ್ಲಿನ ಸಂದೇಶ.

# ಶ್ರೀಕೃಷ್ಣನು ಒರಳು ಎಳೆಯುವುದು



ಶ್ರೀಕೃಷ್ಣನು ಮನೆಯಲ್ಲಿರದೇ ಅಲ್ಲಿಗೆ, ಇಲ್ಲಿಗೆ, ಹೋಗಿ ಗಲಾಟೆ ಮಾಡುತ್ತಿದ್ದನೆಂದು ಯಶೋಧ ಕೃಷ್ಣನನ್ನು ಎಲ್ಲಗೂ ಹೋಗದಂತೆ ಇರಬೇಕೆಂದು ಒಂದು ಒರಳ್ಳಿಗೆ ಕಟ್ಟಿಬಿಟ್ಟಳು. ಆಗ ಶ್ರೀಕೃಷ್ಣನು ಒರಳ್ಳನ್ನೇ ಎಳೆಯುತ್ತಾ ಹೊರಗೆ ಹೋದನು.

ಆಗ ಆ ಒರಳ್ಳು ಎರಡು ಗಿಡಗಳಿಗೆ ಬಡೆಯುತ್ತಾ ತಾಕಿದೆ. ಕೃಷ್ಣನು ಜೋರಾಗಿ

ಎಳೆಯುವಷ್ಟರಲ್ಲಿ ಆ ಎರಡು ಗಿಡಗಳು ಬಿದ್ದು ಇಬ್ಬರು ಗಂಧರ್ವರು ಪ್ರತ್ಯೇಕ್ಷವಾಗಿ ಶ್ರೀಕೃಷ್ಣನಿಗೆ ನಮಸ್ಕರಿಸಿ ನಮಗೆ ಶಾಪವಿಮೋಚನೆಯನ್ನು ಮಾಡಿದೆ ಎಂದು ಶ್ರೀಕೃಷ್ಣನಿಗೆ ಕೃತಜ್ಞತೆಗಳನ್ನು ತಿಳಿಸಿ ಅದೃಶ್ಯವಾದರು.

ಈ ಸನ್ನಿವೇಶದಲ್ಲಿ ಅಂತರಾರ್ಥ ನೋಡೋಣ. ಆ ಗಂಧರ್ವರು ಶಾಪಗ್ರಸ್ಥರಾದರು. ಅಂದರೆ ಮಾಡಿದ ಪಾಪಕ್ಕೆ ಶಿಕ್ಷೆ ಅನುಭವಿಸುತ್ತಾರೆಂದು ಇದರ ಅರ್ಥ. ಪಾಪ ಮಾಡುವುದೆಂದರೆ ತಪ್ಪು ಮಾಡುವುದು. ಗಿಡಗಳ ಹಾಗೇ ಬದಲಾದರು ಎಂದರೆ ಬಹಳ ದೊಡ್ಡ ಶಿಕ್ಷೆ ಅನುಭವಿಸುತ್ತಾರೆಂದು ಅರ್ಥ. ಅಂದರೆ ಅಷ್ಟು ಘೋರ ತಪ್ಪು ಮಾಡಿದ್ದಾರೆ ಎಂದರ್ಥ.

ಏಕೆಂದರೆ ಈ ಸೃಷ್ಟಿಯಲ್ಲಿ ಎಲ್ಲದಕ್ಕಿಂತ ಖನಿಜ ಜಾತಿ... ಎಂದರೆ ಕಲ್ಲು, ಬಂಡೆಗಳು, ಕನಿಷ್ಠ ಜಾತಿಗೆ ಸೇರಿವೆ. ಕಾರಣ ಅವು ಕದಲುವುದಿಲ್ಲ, ಬೇಳೆಯುವುದಿಲ್ಲ, ಅದಕ್ಕಿಂತ ಉನ್ನತವಾದ ಜಾತಿ ವೃಕ್ಷಜಾತಿ, ಕಾರಣ ವೃಕ್ಷಗಳು, ಗಿಡಗಳು, ಕದಲುತ್ತವೆ, ಬೆಳೆಯುತ್ತವೆ. ವೃಕ್ಷಜಾತಿಗಿಂತ ಉನ್ನತವಾದ ಜಾತಿ, ಜೀವಿಜಾತಿ ಕಾರಣ ಜೀವಿಗಳು ಕದಲುತ್ತವೆ, ತಿರುಗುತ್ತವೆ. ಹಾಗೇ ಜೀವಿಜಾತಿಗಿಂತ ಉನ್ನತವಾದ ಜಾತಿ ಮಾನವ ಜಾತಿ. ಕಾರಣ ಮಾನವರು ಕದಲುತ್ತಾರೆ, ತಿರುಗುತ್ತಾರೆ, ಬೆಳೆಯುತ್ತಾರೆ, ಅಷ್ಟೇ ಅಲ್ಲ ಭೂಮಿ ಮೇಲೆ ಯಾವ ಜಾತಿ ಮಾಡದ ಕೆಲಸಗಳನ್ನು ಮಾಡುತ್ತಾರೆ. ಅಂದರೆ ಆಲೋಚಿಸುತ್ತಾರೆ. ಅಂತಹ ಮಾನವ ಜಾತಿಗಿಂತ ಉನ್ನತವಾದ ಜಾತಿ, ದೇವತೆಗಳು, ಯಕ್ಷರು, ಗಂಧರ್ವರು. ಕಾರಣ ಇವರಿಗೆ ಅತೀಂದ್ರಿಯ ಜ್ಞಾನವಿದೆ. ಅತೀದ್ರಿಯ ಶಕ್ತಿಗಳು ಸಹ ಇವೆ.

ಅಂತಹ ಉನ್ನತವಾದ ಗಂಧರ್ವರು ವೃಕ್ಷಗಳಂತೆ ಬಿದ್ದಿರೆಂದರೆ ಎಂತಹ ಘೋರವಾದ ಶಿಕ್ಷೆ ಅನುಭವಿಸುತ್ತಿದ್ದರೋ ಆಲೋಚಿಸಬಹುದು. ಈ ಸನ್ನಿವೇಶದ ಅರ್ಥ ಅಂತಹ ಘೋರ ಶಿಕ್ಷೆ ಅನುಭವಿಸುತ್ತಿರುವವರಿಗೆ ಸಹ ಶ್ರೀಕೃಷ್ಣನ ಸ್ಪರ್ಶದಿಂದ ಅಂದರೆ ಸಾಂಗತ್ಯದಿಂದ ವಿಮುಕ್ತರಾದರು. ಅಂದರೆ ಅಂತಹ ಕಷ್ಟಗಳಿಂದ ಹೊರಬಂದರು.

ಇದರಿಂದ ನಾವು ಅರ್ಥಮಾಡಿಕೋಳ್ಳಬೇಕಾಗಿದ್ದು ಶ್ರೀಕೃಷ್ಣನಂತೆ ಮಹಾಜ್ಞಾನಿ ಭೂಮಿ ಮೇಲೆ ಬಂದಿದ್ದದರಿಂದ ಅವನ ಸಾಂಗತ್ಯದಿಂದ ಎಷ್ಟೋ ಜನ ಶಾಪಗ್ರಸ್ಥರಾದರು ಅಂದರೆ ಕಷ್ಟಗಳು ಅನುಭವಿಸುತ್ತಿರುವವರು ಸಹ ಅವೆಲ್ಲ ಕಷ್ಟಗಳಿಂದ ಹೊರ ಬರುತ್ತಾರೆಂದು ತಿಳಿಯಪಡಿಸುವುದೇ ಈ ಸನ್ನಿವೇಶದ ಅಂತರಾರ್ಥ.

ನೋಡಿ ಪ್ರಸ್ತುತ ಲೋಕದಲ್ಲಿ ಎಲ್ಲರೂ ಕಷ್ಟಗಳಲ್ಲೆ ಇದ್ದಾರೆ. ಕಷ್ಟಗಳೆಂದರೆ ಅವರು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಗಳಿಗೆ ಅನುಭವಿಸುತ್ತಿರುವ ಶಿಕ್ಷಗಳೆ ಹೊರತು ಇನ್ನೇನು ಅಲ್ಲ. ಕೆಲವು ಜನಕ್ಕೆ ಚಿಕ್ಕ ಶಿಕ್ಷೆಗಳು, ಇನ್ನು ಕೆಲವು ಜನಕ್ಕೆ ಕಠಿಣ ಶಿಕ್ಷೆಗಳು, ಅಂದರೇ ಕೆಲವು ಜನ ಸಹಿಸುವ, ಇನ್ನು ಕೆಲವು ಜನ ಸಹಿಸಲಾಗದ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ.

ಹಾಗೆ ಕಷ್ಟಗಳು ಅನುಭವಿಸುತ್ತಿರುವವರಿಗೆ ವಿಮುಕ್ತಿ ಕೊಡಲು ಅಂತಹ ಮಹಾಜ್ಞಾನಿ, ಯೋಗಿಶ್ವರನಾದ ಶ್ರೀಕೃಷ್ಣ ಭಗವಾನನು ಭೂಮಿ ಮೇಲೆ ಅವತರಿಸಿದ್ದಾನೆ. ಅವರಿಂದ, ಅವರ ಸಾಂಗತ್ಯದಿಂದ ಕಷ್ಟಗಳು ಅನುಭವಿಸುವವರು ಎಷ್ಟೋ ಜನ ಕಷ್ಟಗಳಿಂದ ವಿಮುಕ್ತರಾಗುತ್ತಾರೆ ಅಂದರೆ ಹೊರಬರುತ್ತಾರೆಂದು ತಿಳಿಸುವ ಸನ್ನಿವೇಶವಿದು.

ಈ ಸನ್ನಿವೇಶದ ಮೂಲಕ ನಾವು ಅರ್ಥಮಾಡಿಕೊಳ್ಳಬೇಕಾಗಿದ್ದು ಅಂತಹ ಮಹಾಜ್ಞಾನಿಯ ಸಾಂಗತ್ಯ ಮಾಡಿದವರು ಕಷ್ಟಗಳಿಂದ ಹೊರಬರುತ್ತಾರೆಂದು ತಿಳಿಯಬೇಕು. ಮತ್ತೆ ಅಂತಹ ಮಹಾನುಭಾವನ ಸಾಂಗತ್ಯ ಪ್ರಸ್ತೂತ ನಮಗೆ ಸಾಧ್ಯವಿಲ್ಲ.

ಕಾರಣ ಪ್ರಸ್ತೂತ ಅವನು ಭೂಮಿ ಮೇಲೆ ಇಲ್ಲ. ಮತ್ತೆ ನಾವು ಕಷ್ಟಗಳಿಂದ ಹೇಗೆ ಹೊರಬರುತ್ತೆವೆಂಬ ಸಂದೇಹ ಬರಬಹುದು. ಆದರೆ ಶ್ರೀಕೃಷ್ಣನ ಪ್ರತ್ಯೇಕ್ಷ ಸಾಂಗತ್ಯ ಮಾಡದಿದ್ದರೂ ಪರೋಕ್ಷವಾಗಿ ಅವನ ಸಾಂಗತ್ಯ ಮಾಡುವ ಅವಕಾಶವಿದೆ.

ಏಕೆಂದರೆ ಅವನ ಅಪಾರವಾದ ಜ್ಞಾನ ಭಗವದ್ಗೀತೆಯ ಮೂಲಕ ನಮಗೆ ಕೊಟ್ಟಿದ್ದಾರೆ. ಮಾನವರು ದುಃಖದಿಂದ ಹೊರಬರಲು ಮಾಡಿದ ಪಾಪಗಳಿಂದ ವಿಮುಕ್ತರಾಗಲು ಒಳ್ಳೆಯ ಮಾರ್ಗ ಬೋಧಿಸಿದ್ದಾರೆ.

ಆ ಜ್ಞಾನಮಾರ್ಗವನ್ನು ಅರ್ಥಮಾಡಿಕೊಂಡು, ಆಚರಿಸುವವರು ಯಾರೇ ಆದರೂ ಸರಿ ಆ ದೇವತೆಗಳ ಹಾಗೆ ಶಾಪವಿಮುಕ್ತರಾಗುತ್ತಾರೆಂದು ಅಂದರೆ ಕಷ್ಟಗಳಿಂದ ಹೊರಬರುತ್ತಾರೆಂದು ಎಂತಹ ಘೋರವಾದ ಕಷ್ಟಗಳು ಅನುಭವಿಸುತ್ತಿರುವವರಾದರೂ ಸರಿ, ಅವುಗಳಿಂದ ವಿಮುಕ್ತರಾಗುತ್ತಾರೆಂದು ಹೇಳುವುದೇ ಈ ಸನ್ನಿವೇಶದ ಸಂದೇಶ.

ಅಲ್ಲಿ ಕಾಣಿಸುವ ಸನ್ನಿವೇಶ ಪ್ರತ್ಯೇಕ್ಷ ಸಾಂಗತ್ಯ. ಆದರೆ ಅವನ ಗೀತಾ ಸಂದೇಶವನ್ನು ಆಚರಿಸಿದರೆ, ಪ್ರತ್ಯೇಕ್ಷ ಸಾಂಗತ್ಯಕ್ಕೆ ಅವಕಾಶ ಇಲ್ಲದಿದ್ದರೂ ಶ್ರೀಕೃಷ್ಣನ ಜೊತೆ ಪರೋಕ್ಷ ಸಾಂಗತ್ಯ ಮಾಡಿದಂತೆ, ಯಾವುದಾದರೂ ಆತನ ಸಾಂಗತ್ಯವೇ ಶ್ರೀಕೃಷ್ಣನ ಸಾಂಗತ್ಯದಿಂದ ಶಾಪ ವಿಮೋಚನೆ ಆಯಿತೆಂದರೆ ಶಿಕ್ಷೆಯಿಂದ ಹೊರಬಂದೆವೆಂದು ಅರ್ಥ. ಅಂದರೆ ಕಷ್ಟಗಳಿಂದ ಹೊರಬರುವುದೇ. ಆದ್ದರಿಂದ **"ಅದ್ಭುತವಾದ ಶ್ರೀಕೃಷ್ಣ ಭಗವಾನನ ಗೀತಾ ಬೋಧನೆ ಅರ್ಥಮಾಡಿಕೊಂಡು ಆಚರಿಸಿರಿ, ನೀವು ಸಹ ಕಷ್ಟಗಳಿಂದ ವಿಮುಕ್ತಿ ಪಡೆಯುತ್ತೀರ"**. ಇದೇ ಈ ಸನ್ನಿವೇಶದಲ್ಲಿನ ಅಂತರಾರ್ಥ.

**ಯೋಗಿಗಳೆಲ್ಲಾ ಹೇಳಿದ್ದು ಧ್ಯಾನವೇ - ಮಾಡಿದ್ದು ಧ್ಯಾನವೇ**



**ಧ್ಯಾನವೆಂದರೆ ಶ್ವಾಸದ ಮೇಲೆ ಗಮನ**

# ಶ್ರೀಕೃಷ್ಣನು ಬಾಯಿಯಲ್ಲಿ ಸಮಸ್ತ ಲೋಕಗಳನ್ನು ತೋರಿಸುವುದು



ಶ್ರೀಕೃಷ್ಣನು ಒಂದು ಒಮ್ಮೆ ಮಣ್ಣು ತಿನ್ನುತ್ತಿದ್ದನು. ಅದನ್ನು ಬಲರಾಮನು, ಗೋಪಿಕೆಯರು, ನೋಡಿದರು. ಮಣ್ಣು ತಿನ್ನುತ್ತಿದ್ದೀಯಾ? ಎಂದರು. ಕೃಷ್ಣನು ಇಲ್ಲ ಎಂದನು. ಆಗ ಬಲರಾಮನು, ಗೋಪಿಕೆಯರು, ನೀನು ಸುಳ್ಳು ಹೇಳುತ್ತಿದ್ದೀಯಾ, ಅಮ್ಮ ಯಶೋಧೆಗೆ ಹೇಳುತ್ತೇವೆ ಇರು ಎಂದು ಅವರು ಶ್ರೀಕೃಷ್ಣನನ್ನು ಯಶೋಧಳ

ಹತ್ತಿರ ಕರೆದುಕೊಂಡು ಹೋಗಿ, ನೋಡಮ್ಮಾ! ಯಶೋಧಮ್ಮಾ! ಶ್ರೀಕೃಷ್ಣನು ಮಣ್ಣು ತಿನ್ನುತ್ತಿದ್ದಾನೆ ಎಂದರು. ಆಗ ಯಶೋಧ ನಿಜವೇ? ಎಂದು ಕೇಳಿದಳು. ಅದಕ್ಕೆ ಶ್ರೀಕೃಷ್ಣನು ಇಲ್ಲ ಎಂದನು. ಆಗ ಯಶೋಧ ಆದರೆ ಬಾಯಿ ತೆರೆ ಎಂದಳು. ಕಾರಣ ಮಣ್ಣು ತಿಂದವರ ಬಾಯಿಯಲ್ಲಿ ಮಣ್ಣು ಇರುತ್ತದೆ ಆದ್ದರಿಂದ.

ಶ್ರೀಕೃಷ್ಣನು ಬಾಯಿ ತೆರೆದನು. ತಕ್ಷಣ ಯಶೋಧಗೆ ಆಶ್ಚರ್ಯ ಮೂಡಿತು. ನಿಬ್ಬೆರಗಾದಳು. ಕಾರಣ ಶ್ರೀಕೃಷ್ಣನ ಬಾಯಿಯಲ್ಲಿ ಅಂದರೆ ಅವನಲ್ಲಿ ಸಮಸ್ತ ಲೋಕಗಳು ಕಾಣಿಸಿವೆ.

ಕೋಟ್ಯಾನುಕೋಟಿ ಗ್ರಹಗಳು, ಎಷ್ಟೋ ಆಶ್ಚರ್ಯಗಳು, ದೃಶ್ಯಗಳು ಸಮಸ್ತ ಸೃಷ್ಟಿ ಅವಳಿಗೆ ಕಾಣಿಸಿದವು. ಅವಳು ಆಗ ಇವನು ಸಾಮಾನ್ಯನಲ್ಲ ಎಂದು ತಿಳಿದು, ಹತ್ತಿರಕ್ಕೆ ಕರೆದುಕೊಂಡಳು.

ಇದರ ಅಂತರಾರ್ಥ ತಿಳಿಯೋಣ. ಭಗವಂತನು ಅಂದರೆ ಚೈತನ್ಯ ಶಕ್ತಿ, ಸೃಷ್ಟಿ ಎಲ್ಲಾ ವ್ಯಾಪಿಸಿದೆ. ಅವನಿಂದಲೇ ಈ ಸೃಷ್ಟಿ, ಸೃಷ್ಟಿಯಲ್ಲಿನ ಸಮಸ್ತ ಲೋಕಗಳು ಉದ್ಭವಿಸಿವೆ. ಈ ಸಮಸ್ತ ಲೋಕಗಳನ್ನೇ 14 ಭುವನ ಭಾಂಡಗಳೆಂದು ಯೋಗಿಗಳು ಹೇಳಿದರು. ಇವುಗಳನ್ನೇ 7 ಊರ್ದ್ವ ಲೋಕಗಳು, 7 ಅಧೋ ಲೋಕಗಳೆಂದು ತಿಳಿಸಿದ್ದಾರೆ. ಹಾಗೆ ಅವು (1) ಭೂಲೋಕ, (2) ಭುವಲೋಕ, (3) ಸುವಲೋಕ, (4) ಜನಾಲೋಕ, (5) ಮಹಾಲೋಕ, (6) ತಪೋಲೊಕ, (7) ಸತ್ಯಲೋಕವೆಂಬ ಊರ್ದ್ವಲೋಕಗಳು.

ಹಾಗೆಯೇ (1) ಅತಲ, (2) ವಿತಲ, (3) ಸುತಲ, (4) ರಸಾತಲ, (5) ಮಹಾತಲ, (6) ತಲಾತಲ, (7) ಪಾತಾಳ ಲೋಕಗಳೆಂಬ ಅಧೋಲೋಕಗಳು. ಹಾಗೇ ಲೋಕಗಳಲ್ಲಿ ಎಷ್ಟೋ ಲಕ್ಷ ಜೀವಿಗಳು, ಜೀವರಾಶಿಗಳು, ಆ ಭಗವಂತನನಿಂದ ಅಂದರೆ ಚೈತನ್ಯದಿಂದ ಉದ್ಭವಿಸಿವೆ. ಅಂದರೆ ಎಲ್ಲಾ ಅವನಲ್ಲಿಯೇ ಇವೆ.

ಹಾಗೇ ಭಗವಂತನು ತಾನೇ ಈ ಜೀವಿಗಳಲ್ಲೆಲ್ಲಾ ಇದ್ದು ಅವುಗಳಿಗೆ ಚೈತನ್ಯ ಉಂಟುಮಾಡಿ ಅವುಗಳನ್ನು ನಡೆಸುತ್ತಿದ್ದಾರೆ. ಗಮನಿಸಿದರೆ **"ಭಗವಂತನಲ್ಲಿ ಎಲ್ಲಾ ಇವೆ. ಹಾಗೇ ಎಲ್ಲಾ ಜೀವಿಗಳಲ್ಲಿ ಭಗವಂತನಿದ್ದಾನೆ"** ಎಂದು ಅರ್ಥವಾಗುತ್ತದೆ. ಅದಕ್ಕೆ ಹೇಳುತ್ತಾರೆ. **"ನಾವು ಸೃಷ್ಟಿಯಲ್ಲಿದ್ದೇವೆ, ನಮ್ಮಲ್ಲಿ ಸೃಷ್ಟಿ ಇದೆ"** ಅಂದರೆ ನಮ್ಮಲ್ಲಿಯೂ ಸಮಸ್ತವೂ ಇದೆ ಅಂದರೆ ಸಮಸ್ತ ಲೋಕಗಳು ನಮ್ಮಲ್ಲಿವೆ ಎಂದರ್ಥ.

ಈ ಸತ್ಯವನ್ನು ಲೋಕಕ್ಕೆ ತಿಳಿಯಪಡಿಸಲು ಈ ಸನ್ನಿವೇಶ, ಅದೇ ಈ ಸನ್ನಿವೇಶದಲ್ಲಿನ ಅಂತರಾರ್ಥ. ಅಂದರೆ ಸಮಸ್ತ ಲೋಕಗಳು ಹೊರಗಿರುವುದಲ್ಲ, ನಮ್ಮಲ್ಲಿಯೂ ಇವೆ ಎನ್ನುವುದೇ ಈ ಸನ್ನಿವೇಶದ ಸಂದೇಶ.

ಪ್ರಸ್ತೂತ ನಾವು ಗಮನಿಸಿದರೆ ಸೃಷ್ಟಿ ರಹಸ್ಯಗಳು ತಿಳಿಯಲು ಮಾನವರು ಅಂತರಿಕ್ಷದೊಳಗೆ ರಾಕೆಟ್‌ಗಳ ಮೂಲಕ ಇತರ ಗ್ರಹಗಳಿಗೆ ಪ್ರಯಾಣಿಸುತ್ತಿದ್ದಾರೆ. ಶಕ್ತಿವಂತವಾದ ಟೆಲಿಸ್ಕೋಪ್‌ಗಳು ಉಪಯೋಗಿಸಿ ಸೃಷ್ಟಿ ರಹಸ್ಯಗಳನ್ನು ಅನ್ವೇಷಿಸುತ್ತಿದ್ದಾರೆ. ಉಪಗ್ರಹಗಳು ಪ್ರಯೋಗಿಸಿ ಸೃಷ್ಟಿಯಲ್ಲಿ ಆಶ್ಚರ್ಯಗಳು, ವಿಶೇಷಗಳು ತಿಳಿಯಲು ಪ್ರಯತ್ನಿಸುತ್ತಿದ್ದಾರೆ.

ಹಾಗೇ ಮಾನವರು ತಮ್ಮ ಮೇಧಸ್ಸನ್ನು ಎಷ್ಟು ಉಪಯೋಗಿಸಿ, ಎಷ್ಟು ಪ್ರಯತ್ನಗಳು ಪಟ್ಟರೂ, ಸೃಷ್ಟಿಯಲ್ಲಿ ಬಹಳ ಅಲ್ಪ ಜ್ಞಾನವನ್ನೇ ಪಡೆಯುತ್ತಿದ್ದಾರೆ. ಸೃಷ್ಟಿಯ ಬಗ್ಗೆ ಬಹಳ ಸ್ವಲ್ಪ ತಿಳಿಯುತ್ತಿದ್ದಾರೆ. ಹಾಗೆ ನಿರಂತರ ಶ್ರಮ ಪಡುತ್ತಿದ್ದಾರೆ. ಎಷ್ಟೋ ಲಕ್ಷಗಳ ಕೋಟಿ ರೂಪಾಯಿಗಳು ಎಲ್ಲಾ ದೇಶಗಳು ಖರ್ಚು ಮಾಡುತ್ತಿವೆ. ಆದರೆ ಯಾರೂ ಅಷ್ಟಕ್ಕೂ ಯೋಚಿಸುತ್ತಿಲ್ಲ.

ಆದರೆ ಭಾಗವತದಲ್ಲಿನ ಈ ಸನ್ನಿವೇಶದ ಅಂತರಾರ್ಥ ತಿಳಿದರೆ, ಅಂದರೆ ಸಮಸ್ತ ಸೃಷ್ಟಿ ನಮ್ಮಲ್ಲೇ ಇದೆ ಎಂಬ ಸತ್ಯ ಅರ್ಥಮಾಡಿಕೊಂಡರೆ ಯಾರಾದರೂ ಹಾಗೆ ಪ್ರಯಾಸ ಪಟ್ಟು ಬಾಹ್ಯದೊಳಗೆ ಪ್ರಯಾಣ ಮಾಡುವುದಿಲ್ಲ. ಅವರಲ್ಲೇ ಅಂದರೆ ಅಂತರದೊಳಗೆ ಪ್ರಯಾಣಿಸುತ್ತಾರೆ.

ಕಾರಣ ಎಲ್ಲಾ ನಮ್ಮಲ್ಲೇ ಇದೆ ಆದ್ದರಿಂದ ಸೃಷ್ಟಿ ರಹಸ್ಯಗಳು ತಿಳಿಯಬೇಕೆಂದದು, ಸೃಷ್ಟಿಯಲ್ಲಿನ ಲೋಕಗಳ ಬಗ್ಗೆ ತಿಳಿಯಬೇಕೆಂದರೂ, ಯಾರಾದರೂ ಸರಿ ಯಾರಿಗೆ ಅವರು ತಮ್ಮೊಳಗೆ ತಾವು ಪ್ರಯಾಣ ಮಾಡಲೇಬೇಕು ಅಂದರೆ ಅಂತರ್ಮುಖರು ಆಗಲೇಬೇಕು.

ಅಂದರೆ ಸುಭಾಷ್ ಪತ್ರಿಯವರು ಬೋಧಿಸಿದ "ಉಸಿರಿನ ಮೇಲೆ ಧ್ಯಾನ" ಮಾಡಲೇಬೇಕು. ತಿಳಿಯಿರಿ ಕೋಟ್ಯಾನುಕೋಟಿ ಖರ್ಚುಮಾಡಿ ಸಾಧಿಸಲಾಗದೇ ಇರುವುದು, ಖರ್ಚಿಲ್ಲದೇ ಅಂತರ್ಮುಖರಾಗಿ ಧ್ಯಾನದಿಂದ ಸಾಧಿಸಬಹುದೆಂದು ಈ ಸನ್ನಿವೇಶದಲ್ಲಿನ ಸಂದೇಶ ತಿಳಿದರೇ ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ.

ಮತ್ತೊಂದು ಸಾರಿ ತಿಳಿಯಿರಿ ಶ್ರೀಕೃಷ್ಣನೊಳಗೇ ಅಲ್ಲ ಸಮಸ್ತ ಲೋಕಗಳು ಪ್ರತಿಯೊಬ್ಬರಲ್ಲಿ ಇವೆ. ಅದೇ ಈ ಸನ್ನಿವೇಶದ ಅಂತರಾರ್ಥ.

ಅಂದರೆ ನಮ್ಮಲ್ಲಿ ಇಲ್ಲದ್ದು ಯಾವುದೂ ಇಲ್ಲ, ನಮ್ಮೊಳಗೆ ಹೋದರೆ ಅಂದರೆ ಧ್ಯಾನ ಮಾಡಿದರೆ ತಿಳಿಯದೇ ಇರುವುದು ಏನೂ ಇಲ್ಲ. ಎನ್ನುವುದೇ ಈ ಸನ್ನಿವೇಶದ ಸಂದೇಶ. ಆದ್ದರಿಂದ ಯೋಗಿಗಳೆಲ್ಲಾ ಧ್ಯಾನ ಮಾಡಿ ಸೃಷ್ಟಿ ರಹಸ್ಯಗಳನ್ನು ತಿಳಿದಿದ್ದಾರೆ.

**ಯೋಗಿಗಳೆಲ್ಲಾ ಹೇಳಿದ್ದು ಧ್ಯಾನವೇ – ಮಾಡಿದ್ದು ಧ್ಯಾನವೇ**



**ಧ್ಯಾನವೆಂದರೆ ಶ್ವಾಸದ ಮೇಲೆ ಗಮನ**

# ಕಾಳ ಸರ್ಪದ ಹೆಡೆಯ ಮೇಲೆ ನಾಟ್ಯ ಮಾಡುವುದು



ಹಾಗೆ ಕಾಳಿಂಗ ಎಂಬ ದೊಡ್ಡ ಹಾವು ಗೋವುಗಳನ್ನು, ಗೋಪಾಲಕರನ್ನು, ಸಾಯಿಸುವುದು, ಅವರನ್ನು ಪಾತಾಳಕ್ಕೆ ಎಳೆಯುವಂತಹದು ಮಾಡುತ್ತಿದ್ದರೇ ಶ್ರೀಕೃಷ್ಣನು ಆ ದೊಡ್ಡ ಹಾವನ್ನು ಶಿಕ್ಷಿಸುವುದಷ್ಟೇ ಅಲ್ಲ, ಅದರ ಹೆಡೆಯ ಮೇಲೆ ನಾಟ್ಯ ಮಾಡಿ ಅದರ ಗರ್ವವನ್ನು ಬಗ್ಗು ಬಡಿದನು. ಅಂದಿನಿಂದ ಆ ಸರ್ಪದಿಂದ ಯಾರಿಗೂ ಯಾವ ನೋವು, ಯಾವ ತೊಂದರೆಯೂ ಇಲ್ಲದಂತೆ ಮಾಡಿದರು.

ಇದರಿಂದ ಈ ಸೃಷ್ಟಿಯಲ್ಲಿ ದುಷ್ಟರು ಶಿಕ್ಷಿಸಲ್ಪಡುತ್ತಾರೆಂದು, ಅಲ್ಪರು, ಬಲಹೀನರು, ರಕ್ಷಿಸಲ್ಪಡುತ್ತಾರೆಂದು ನಾವು ತಿಳಿಯಬೇಕು. ಅದೇ ಈ ಸನ್ನಿವೇಶದಲ್ಲಿನ ಅರ್ಥ ಅಥವಾ ಸಂದೇಶ.

ಇದರ ಮೂಲಕ ಈ ಸೃಷ್ಟಿಯಲ್ಲಿ ಎಷ್ಟೇ ಬಲವಂತವಾದರೂ, ಎಷ್ಟೇ ಧನವಂತರಾದರೂ, ಕೊನೆಗೆ ರಾಜರು, ಚಕ್ರವರ್ತಿಗಳಾದರೂ, ತಮ್ಮ ಬಲ ನೋಡಿಕೊಂಡು ಅಧಿಕಾರ ಗರ್ವದಿಂದ ಬೀಗುತ್ತಾ ತಾವು ಏನೇ ಮಾಡಿದರೂ ಯಾರೇನು ಮಾಡುತ್ತಾರೆಂದು ಭಾವಿಸುತ್ತಾ ಸಾಮಾನ್ಯರನ್ನು, ಬಲಹೀನರನ್ನು, ತಮಗಿಂತ ಕಡಿಮೆಯವರನ್ನು ಭಾದಿಸಿದರೂ ದೌರ್ಜನ್ಯ ಮಾಡಿದರೂ, ತಮ್ಮ ಸ್ವಾರ್ಥಕ್ಕಾಗಿ ಅವರನ್ನು ನೋಯಿಸಿದರೂ, ತಮಗೆ ಅಧಿಕಾರ ಇದೆ ಎಂದೆ ಯಾರನ್ನು ಕೊಂದರೂ, ಅವರು ಎಂತಹವರಾದರೂ ಈ ಸೃಷ್ಟಿಯಲ್ಲಿ ಶಿಕ್ಷಿಸಲ್ಪಡುತ್ತಾರೆಂದು ಅವರ ಗರ್ವ ಕೆಳಗಿಳಿಸಿ ಕೋರೆ ತೆಗೆದ ಹಾವಿನಂತೆ ಮಾಡಲಾಗುತ್ತದೆಂದು ಅವರು ಕಠಿಣವಾಗಿ ಶಿಕ್ಷಿಸಲ್ಪಡುತ್ತಾರೆಂದು ಎಂತಹವರಾದರೂ ಕೊನೆಗೆ ಮಣ್ಣಿನಲ್ಲಿ ಬೆರೆತುಹೋಗುತ್ತಾರೆಂದು ಈ ಸನ್ನಿವೇಶ ಸಂದೇಶ.

ಹಾಗೆ ನಮಗೆ ಯಾರೂ ಸಾಟಿಯಿಲ್ಲ ಎಂದು ಬೀಗುವ ಎಷ್ಟೋ ಜನ ರಾಜರು, ನಾಯಕರು, ಕೊನೆಗೆ ಅತಿ ಹೀನವಾಗಿ ಪ್ರಜೆಗಳ ಕೈಯಲ್ಲೇ ಶಿಕ್ಷಿಸಲ್ಪಡುತ್ತಾರೆಂದು, ನಮಗೆ ಸಾಟಿಯಿಲ್ಲದ ರೌಡಿಗಳು, ಗುಂಡಾಗಳು, ರಾಜಕೀಯ ನಾಯಕರು, ಕೊನೆಗೆ ತುಂಬಾ ದುರಾಣವಾಗಿ ಮರಣಿಸುವುದು, ಸಾಯಿಸಲ್ಪಡುವುದು, ಜೈಲುಪಾಲಾಗುವುದು ಸಹ ನೋಡುತ್ತಿದ್ದೇವೆ. ಇದರಿಂದ ನಮಗೆ ತುಂಬಾ ಶಕ್ತಿ ಇದೆಯೆಂದು ಬೀಗುವವರು ಯಾರಾದರೂ ಕೊನೆಗೆ ಅವಮಾನಕ್ಕೆ ಗುರಿಯಾಗಬೇಕು ಎನ್ನುವುದು ಈ ಸನ್ನಿವೇಶದ ಮೂಲಕ ತಿಳಿಯಬಹುದು. ಆದ್ದರಿಂದ ಯಾರಾದರೂ ಸರಿ ತಮಗಿರುವುದು ಶಕ್ತಿ ಆಗಬಹುದು, ಹಣ ಆಗಿರಬಹುದು, ಅಧಿಕಾರ ಆಗಿರಬಹುದು, ಸ್ಥಾನ ಗರ್ವಪಡಬಾರದು, ಯಾರನ್ನು ನೋಯಿಸಬಾರದು ಎಂದು ತಿಳಿಯಬೇಕು. ಈ ಸೃಷ್ಟಿಯಲ್ಲಿ ಎಲ್ಲರೂ ಸಮಾನವೆಂದು ತಿಳಿಯಬೇಕು. ಅದೇ ಈ ಸನ್ನಿವೇಶದಲ್ಲಿರುವ ಸಂದೇಶ.



**ಪ್ರೀತಿಯಿಂದ ಬೆಳೆಸುವುದು.... ಕ್ರೂರವಾಗಿ ಸಾಯಿಸಲಿಕ್ಕಾಗಿಯೇ?**

**ನಾವು ಮಾನವರು.... ಪ್ರೀತಿಯೇ ನಮ್ಮ ಮತ.**

## . ಶ್ರೀಕೃಷ್ಣನು ರಾಕ್ಷಸರನ್ನು ಸರಳವಾಗಿ ಸಂಹರಿಸುವುದು



ಭಾಗವತದಲ್ಲಿನ ಎಷ್ಟೋ ಸನ್ನಿವೇಶಗಳಲ್ಲಿನ ಭಗವಾನನು ಎಷ್ಟೋ ಜನ ರಾಕ್ಷಸರನ್ನು ಬಹಳ ಸರಳವಾಗಿ ಶಿಕ್ಷಿಸಿ, ಸಂಹರಿಸುವುದು ನಮಗೆ ಕಾಣಿಸುತ್ತದೆ. ಎಷ್ಟೋ ಜನ ರಾಕ್ಷಸರನ್ನು ಸಂಹರಿಸಿ, ಸೋಲಿಸುವುದು ನಮಗೆ ಕಾಣಿಸುತ್ತದೆ.

ಇದರ ಅರ್ಥ ಲೋಕದಲ್ಲಿ ಅಸುರ ಶಕ್ತಿ, ದೈವಶಕ್ತಿ, ಎಂಬ ಎರಡು ವಿಧದ ಶಕ್ತಿಗಳಿವೆ. ಲೋಕದ ಜನರನ್ನು, ಲೋಕವನ್ನು ನಷ್ಟಪಡಿಸಿ, ಕಷ್ಟಗಳನ್ನು ನೀಡುವವರದು ಅಸುರಶಕ್ತಿ. ಹಾಗೇ ಉಪಕಾರ ಮಾಡಿ, ಸಹಾಯ ಮಾಡಿ, ಆನಂದಪಡಿಸುವವರದು ದೈವಶಕ್ತಿ ಎನ್ನುತ್ತಾರೆ. ಭಾಗವತದಲ್ಲಿನ ಸನ್ನಿವೇಶಗಳ ಮೂಲಕ ದೈವಶಕ್ತಿಯ ಮುಂದೆ ಅಸುರಶಕ್ತಿ ತಲೆಬಾಗಲೇಬೇಕು ಅಂದರೆ ಸೋಲಲೇಬೇಕು ಎಂದು ತಿಳಿಯುತ್ತದೆ.

ನಾವು ಯಾವುದರಲ್ಲಾದರೂ ಎಂತಹ ಬಲವಂತರಾದರೂ, ಎಂತಹ ಹೆಸರು ಪ್ರಖ್ಯಾತ ಇದ್ದರೂ, ಎಂತಹ ಉನ್ನತಸ್ಥಾನ ಹೊಂದಿದರೂ, ರಾಕ್ಷಸರಂತೆ ಪ್ರವರ್ತಿಸಿದರೆ ಸೋಲುಪಾಲಾಗದೇ ತಪ್ಪುವುದಿಲ್ಲ ಎಂದು ತಿಳಿಯಬೇಕು. ನಾನು ಇಂತಹ ಸ್ಥಾನದಲ್ಲಿದ್ದೇನೆ, ಅಂತಹಸ್ಥಾನದಲ್ಲಿದ್ದೇನೆ, ಎಂದು ಬೀಗುತ್ತಾ ಅನ್ಯಾಯವಾಗಿ ಅಕ್ರಮವಾಗಿ ಪ್ರವರ್ತಿಸಬಾರದು. ಹಾಗೇ ನಾವು ಬಲಹೀನರಾದರೂ ಸರಿ, ಸಾಮಾನ್ಯರಾದರೂ ಸರಿ, ಧರ್ಮಯುಕ್ತವಾಗಿ ಜೀವಿಸುತ್ತಾ, ಧರ್ಮವನ್ನು ಕಾಪಾಡುತ್ತಾ ಎಲ್ಲರ ಒಳಿತಿಗಾಗಿ ಕೆಲಸ ಮಾಡುತ್ತಿದ್ದರೆ ಎಂತಹವರ ಮೇಲಾದರೂ ನಮ್ಮದೇ ಮೇಲು ಕೈ ಆಗುತ್ತದೆ. ಯಾವ ವಿಷಯದಲ್ಲಾದರೂ ವಿಜಯ ಸಾಧಿಸಬಹುದೆಂದು ಭಾಗವತದಲ್ಲಿನ ಮೇಲಿನ ಸನ್ನಿವೇಶದ ಮೂಲಕ ತಿಳಿಯಬಹುದು. ಅದರ ಸಂದೇಶ ಸಹ ಅದೆ.

# ಗೋಪಿಕೆಯರ ಸ್ನಾನದಾಟ ಶ್ರೀಕೃಷ್ಣನಿಂದ ವಸ್ತ್ರಾಪಹರಣ



ಭಾಗವತದಲ್ಲಿಯ ಮತ್ತೊಂದು ಸನ್ನಿವೇಶದಲ್ಲಿ ಗೋಪಿಕೆಯರು ವಸ್ತ್ರಗಳನ್ನು ದಂಡೆಯ ಮೇಲಿಟ್ಟು ನದಿಯಲ್ಲಿ ಸ್ನಾನ ಮಾಡುತ್ತಿರುತ್ತಾರೆ. ಆಗ ಶ್ರೀಕೃಷ್ಣನು ಆ ವಸ್ತ್ರಗಳನ್ನು ಗಿಡದ ಮೇಲೆ ತನ್ನ ಹತ್ತಿರ ಇಟ್ಟುಕೊಂಡನು. ಗೋಪಿಕೆಯರು ನದಿಯಲ್ಲಿ ಸ್ನಾನಮಾಡಿ ಸಾಕಾಗಿದ ನಂತರ ದಂಡೆಯ ಮೇಲೆ ನೋಡಿದರೆ ಅವರ ವಸ್ತ್ರಗಳು ಗಿಡದ ಮೇಲೆ

ಶ್ರೀಕೃಷ್ಣನ ಹತ್ತಿರ ಇದ್ದವು. ಅವರು ನಾಚಿಕೆಯಿಂದ ವಸ್ತ್ರಗಳನ್ನು ಕೊಡೆಂದು ಬೇಡಿದಾಗ ಶ್ರೀಕೃಷ್ಣನು ಕೊಟ್ಟಿಲ್ಲ, ಅವರು ಕೊನೆಗೆ ನಾಚಿಕೆ ಬಿಟ್ಟು ಕೈಗಳೆರಡು ಜೋಡಿಸಿ ಪ್ರಾರ್ಥಿಸಿದರೇನೆ ಕೊಟ್ಟನು.

ಈ ಸನ್ನಿವೇಶದ ಅಂತರಾರ್ಥ ನೋಡೋಣ. ಶ್ರೀಕೃಷ್ಣನು ಎಂದರೆ ಭಗವಂತನು. ಗೋಪಿಕೆಯರು ಎಂದರೆ ಮಾನವರು ಎಂದರ್ಥ.

ಪ್ರಸ್ತುತ ಮಾನವರು ತಮಗೆ ಅವಶ್ಯಕವಾದ ಸತ್ಯ, ಧರ್ಮ, ಜ್ಞಾನ, ಅಹಿಂಸೆ, ಪ್ರೀತಿ, ಸಂತೋಷ, ಶಾಂತಿ, ಧ್ಯಾನದಂತಹ ವಸ್ತ್ರಗಳನ್ನು ಬಿಟ್ಟು ಈ ಪ್ರಪಂಚವೆಂಬ ನದಿಯಲ್ಲಿ ಸ್ನಾನಮಾಡುತ್ತಿದ್ದಾರೆ. ಅಂದರೆ ಈ ಲೋಕದಲ್ಲಿ ಇಂದ್ರಿಯ ಸುಖಗಳಲ್ಲಿ ಮುಳುಗಿ ತೇಲುತ್ತಿದ್ದಾರೆ.

ಅಂದರೆ ತಿನ್ನುವುದು, ಕುಡಿಯುವುದು, ನಿದ್ರಿಸುವುದೇ ಅಲ್ಲ, ಭೋಜನಾ ಕೂಟ, ವಿನೋದ, ವಿಲಾಸದಂತಹವುಗಳಿಗೆ ಪ್ರಾಮುಖ್ಯತೆ ನೀಡುತ್ತಿದ್ದಾರೆ. ಸಂಸಾರಕ್ಕೆ, ಸಾಂಸಾರಿಕ ಸುಖಗಳಿಗೆ ಪ್ರಾಮುಖ್ಯತೆ ಕೊಡುತ್ತಿದ್ದಾರೆ. ಅವುಗಳಿಗಾಗಿ ಅಧರ್ಮವಾಗಿ ಅಕ್ರಮ ಮಾರ್ಗಗಳಲ್ಲಿ ದುಡ್ಡು ಸಂಪಾದನೆ ಮಾಡುತ್ತಿದ್ದಾರೆ. ಕೆಲವು ವರ್ಷಗಳಿಗೆ ಇವರ ವಿಲಾಸ ಮುಗಿಯುತ್ತದೆ. ಆಗ ಇವರಿಗೆ ಅವಶ್ಯವಾದ ವಸ್ತ್ರಗಳೇ, ಇವರು ಧರಿಸಬೇಕಾದ, ಇವರಿಗೆ ಬೇಕಾದ ಸತ್ಯ, ಧರ್ಮ, ಪ್ರೀತಿ, ಅಹಿಂಸೆ, ಶಾಂತಿ, ಆನಂದ, ಜ್ಞಾನಕ್ಕಾಗಿ ನೋಡಿದರೆ ಅವು ಗಿಡದ ಮೇಲೆ ಶ್ರೀಕೃಷ್ಣನ ಹತ್ತಿರವಿದ್ದಂತೆ ಎಲ್ಲೋ ಭಗವಂತನ ಹತ್ತಿರ ಇರುತ್ತವೆ. ಕಾರಣ ಇವೆಲ್ಲಾ ಭಗವಂತನ ಸಹಜ ಗುಣಗಳು. ಅವು ಇಲ್ಲವಾದ್ದರಿಂದ ಎಷ್ಟು ಸುಖಗಳು, ಭೋಗಗಳು ಇದ್ದರೂ, ಎಷ್ಟು ಹಣವಿದ್ದರೂ, ಮಾನವರು ದುಃಖದಿಂದ ಬಾಧೆ ಪಡುತ್ತಾರೆ.

ಆ ವಸ್ತ್ರಗಳು ಇಲ್ಲದಿದ್ದರೆ ಗೋಪಿಕೆಯರು ನದಿಯಿಂದ ಹೇಗೆ ಹೊರಗೆ ಬರುವುದಿಲ್ಲವೋ! ಹಾಗೇ ಮಾನವರು ಸಹ ದುಃಖದಿಂದ ಹೊರಗೆ ಬರಲಾರರು. ವಸ್ತ್ರಗಳು ಕೊಡು ಎಂದು ಶ್ರೀಕೃಷ್ಣನನ್ನು ಗೋಪಿಕೆಯರು ಬೇಡಿದಂತೆ ಮಾನವರು ಶಾಂತಿ, ಆನಂದ, ಕೊಡೆಂದು ಭಗವಂತನನ್ನು ಬೇಡುತ್ತಿದ್ದಾರೆ. ಪ್ರಾರ್ಥಿಸುತ್ತಿದ್ದಾರೆ. ತರತರದ ಆರಾಧನೆಗಳು ಮಾಡುತ್ತಿದ್ದಾರೆ.

ಆದರೆ ಶ್ರೀಕೃಷ್ಣನು ಅವುಗಳನ್ನು ಕೊಟ್ಟಿಲ್ಲ, ಕೈಎತ್ತಿ ಬೇಡಿಕೋಳ್ಳಿ ಎಂದರು. ಇದಕ್ಕೆ ಸಹ ಅಂತರಾರ್ಥ ಇದೆ. ಮಾನವರು ವ್ಯರ್ಥವಾದ ಆರಾಧನೆಗಳ ಮೂಲಕ ಸುಮ್ಮನೆ ಭಗವಂತನನ್ನು ಪ್ರಾರ್ಥಿಸಿದರೂ, ಬೇಡಿದರೂ, ಅವುಗಳನ್ನು ಪಡೆಯಲಾರರು. ಏಕೆಂದರೇ ಮಾನವರು ಎಷ್ಟೋ ಸಂಪಾದಿಸಿಕೊಂಡು ನಾನು ಬಲಶಾಲಿ, ನಾನು ದೊಡ್ಡ ಉದ್ಯೋಗಿ, ನಾನು ಎಮ್ಮೆಲ್ಯೆ, ನಾನು ಮಂತ್ರಿ, ನಾನು ಅಧಿಕಾರಿ, ನಾನು ಗಂಡ, ಯಜಮಾನ ಎಂದು ಗರ್ವಿಸುತ್ತಿದ್ದಾರೆ. ಆ ಗರ್ವದಿಂದ ಮಾಡಬಾರದ ಕೆಲಸಗಳನ್ನು ಮಾಡುತ್ತಿದ್ದಾರೆ. ಭಗವಂತನನ್ನು, ಭಗವಂತನ ಧರ್ಮಗಳನ್ನು ಮರೆಯುತ್ತಿದ್ದಾರೆ. ಹಾಗೇ ಇನ್ನೂ ಎಷ್ಟೋ ಸಂಪಾದಿಸಿಕೊಂಡು ಈ ಬಂಗಲೆ ನನ್ನದು, ಈ ಕಾರು ನನ್ನದು, ಈ ಹೊಲ ನನ್ನದು, ಈ ಐಶ್ವರ್ಯ ನನ್ನದು, ಎನ್ನುತ್ತಾ ಇಲ್ಲದಿರುವುದನ್ನು ನೋಡಿ ಖುಷಿಪಡುತ್ತಿದ್ದಾರೆ. ಅವನು ಬರುವಾಗ ಯಾವುದರಿಂದ ಬಂದಿಲ್ಲ. ಹಾಗೇ ಹೋಗುವಾಗ ಏನೂ ತೆಗೆದುಕೊಂಡು ಹೋಗುವುದಿಲ್ಲ. ಕಾರಣ ಇವು ಯಾವವು ತನ್ನವಲ್ಲ ಎಂದು

ತಿಳಿಯುತ್ತಿಲ್ಲ. ಎಷ್ಟೋತ್ತು ಇವುಗಳನ್ನು ನೋಡಿ ಆನಂದಿಸುತ್ತಾ, ಮಾಡಬಾರದ ಕೆಲಸಗಳು ಮಾಡುವುದರಿಂದ ಕಷ್ಟಗಳಿಗೆ ಬಲಿಯಾಗುತ್ತಿದ್ದೇನೆಂದು ತಿಳಿಯಲಾಗುತ್ತಿಲ್ಲ. ಆದ್ದರಿಂದ ಅವರಿಗೆ ಬೇಕಾದ ಶಾಂತಿ, ಆನಂದ, ಎಂಬ ವಸ್ತ್ರಗಳು ಪಡೆಯಲಾಗುತ್ತಿಲ್ಲ ಎಂದು ತಿಳಿಯುತ್ತಿಲ್ಲ. ಆದ್ದರಿಂದ ಶಾಂತಿ, ಆನಂದ, ಪಡೆಯಬೇಕಾದರೆ ಮಾನವರು ನಾವು ಎಂಬ ಅಂಹಕಾರ ನನ್ನದು ಎಂಬ ಮಮಕಾರ ಬಿಡಬೇಕು. ಅವರಲ್ಲಿ ಅವು ಇರುವಷ್ಟು ಕಾಲ ಅವುಗಳನ್ನು ಪಡೆಯುವುದಿಲ್ಲ.

ಎಂದಾದರೇ ಮಾನವರು ನಾನು ಎಂಬ ಅಂಹಕಾರ, ನನ್ನದು ಎಂಬ ಮಮಕಾರ ಬಿಡುತ್ತಾರೋ ತಕ್ಷಣ ಗೋಪಿಕೆಯರು ಶ್ರೀಕೃಷ್ಣನಿಂದ ವಸ್ತ್ರಗಳು ಪಡೆದಂತೆ ಮಾನವರು ಭಗವಂತನಿಂದ ಆನಂದ, ಶಾಂತಿ, ಧರ್ಮ, ಜ್ಞಾನ, ಅಹಿಂಸೆ, ಪ್ರೀತಿ, ಧ್ಯಾನ ಎಂಬ ವಸ್ತ್ರಗಳು ಪಡೆಯುತ್ತಾರೆಂದು ಹೇಳುವುದೇ ಇದರಲ್ಲಿನ ಸಂದೇಶ.

ತಿಳಿಯಿರಿ ಮಾನವರು ಈ ಪ್ರಾಪಂಚಿಕ ಸುಖಗಳಲ್ಲಿ ಮುಳುಗಿ ತೇಲುತ್ತಿರುವಷ್ಟು ಕಾಲ ಸತ್ಯ, ಧರ್ಮ, ಪ್ರೀತಿ, ಶಾಂತಿ, ಆನಂದ, ಜ್ಞಾನ, ಅಹಿಂಸೆ, ಎನ್ನುವವು ಪಡೆಯಲಾರರು ಎನ್ನವುದೇ ಈ ಸನ್ನಿವೇಶದ ಅಂತರಾರ್ಥ. ಅಂದರೆ ದುಃಖದಿಂದ ಹೊರಗೆ ಬರುವುದಿಲ್ಲ ಎನ್ನುವುದೇ ಈ ಸನ್ನಿವೇಶದ ಅಂತರಾರ್ಥ.

ಆದ್ದರಿಂದ ಮಾನವರು ಶಾಂತಿ, ಆನಂದ ಪಡೆಯಬೇಕೆಂದರೆ ನಾನು ಎನ್ನುವ ಅಂಹಕಾರ, ನನ್ನದೆನ್ನುವ ಮಮಕಾರ ಬಿಡಬೇಕು. ಅದೇ ಕೈಎತ್ತಿ ಕೇಳು ಎನ್ನುವುದರಲ್ಲಿರುವ ಅಂತರಾರ್ಥ.

ಮತ್ತೆ ನಾನು ಎನ್ನುವ ಅಹಂಕಾರ, ನನ್ನದು ಎನ್ನುವ ಮಮಕಾರ ಹೇಗೆ ಹೋಗುತ್ತವೆ ಈ ಎರಡು ಮನಸ್ಸಿಗೆ ಸಂಬಂಧಿಸಿವೆ. ಆದ್ದರಿಂದ ಮಾನವನು ಈ ಪ್ರಾಪಂಚಿಕ ಸುಖಗಳನ್ನು ಸ್ವಲ್ಪ ಕಡಿಮೆ ಮಾಡಿಕೊಂಡು 'ಧ್ಯಾನ' ಮಾಡಿದರೆ ಮೆಲ್ಲನೆ ಈ ಎರಡು ತೊಲಗುತ್ತವೆ. ಶಾಶ್ವತ ಆನಂದ ಲಭಿಸುತ್ತದೆ.

ಈ ಸನ್ನಿವೇಶದ ಅಂತರಾರ್ಥ ತಿಳಿಯದೆ, ಅಜ್ಞಾನಿಗಳಾದವರು ಇದನ್ನು ವಕ್ರೀಕರಿಸುವುದಷ್ಟೇ ಅಲ್ಲ. ವಿಪರೀತವಾದ ಅರ್ಥಗಳು ತೆಗೆಯುತ್ತಾ ಭಗವಂತನನ್ನು ಅವಮಾನಿಸುತ್ತಿದ್ದಾರೆ. ಆದ್ದರಿಂದ ಪುರಾಣಗಳಲ್ಲಿನ ಪ್ರತಿ ಸನ್ನಿವೇಶದಲ್ಲಿ ಒಂದು ಅಂತರಾರ್ಥ ಅಡಗಿದೆ ಎಂದು ತಿಳಿಯಬೇಕು. ಅವುಗಳ ಮೂಲಕ ಲೋಕಕ್ಕೆ ಇಂದು ಸಂದೇಶ ಕೊಡಲ್ಪಟ್ಟಿದೆ ಎಂದು ಅರ್ಥಮಾಡಿಕೋಳ್ಳಬೇಕು. ಆ ಸಂದೇಶವನ್ನು ಅರ್ಥಮಾಡಿಕೊಂಡು ಆಚರಣೆಯಲ್ಲಿಡಬೇಕು. ಹಾಗೆ ಆಚರಣೆಯಲ್ಲಿ ಇಟ್ಟವರ ಜೀವನವೇ ಧನ್ಯವಾಗುತ್ತದೆ.

# ಶ್ರೀಕೃಷ್ಣನು ಗೋಪಿಕೆಯರೊಂದಿಗೆ ಆಟವಾಡುವುದು



ಶ್ರೀಕೃಷ್ಣನು 16 ಸಾವಿರ ಜನ ಗೋಪಿಕೆಯರೊಂದಿಗೆ, ಆಟವಾಡುವುದನ್ನು, ನೃತ್ಯ ಮಾಡುವುದನ್ನು, ಅಷ್ಟು ಜನ ಗೋಪಿಕೆಯರು ಅವನೆಂದರೆ ಇಷ್ಟಪಡುವವರು, ಅವರೆಂದೂ ಅವನೊಂದಿಗೆ ಇರುತ್ತಿದ್ದರೆಂದು, ಅವರನ್ನು ಶ್ರೀಕೃಷ್ಣನನ್ನು ತನ್ನ ವೇಣುಗಾನದಿಂದ ಮೈಮರೆಯುವ ಹಾಗೆ ಮಾಡುತ್ತಿದ್ದನೆಂದು ಭಾಗವತದಲ್ಲಿ ಹೇಳಲಾಗಿದೆ. ಗೋಪಿಕೆಯರೊಂದಿಗೆ ಶ್ರೀಕೃಷ್ಣನು ನೃತ್ಯ ಮಾಡುವುದು, ಆಟ ಆಡುವಂತ ಸನ್ನಿವೇಶಗಳು ನಾವು ನೋಡುತ್ತಿರುತ್ತೇವೆ ಸಹ ಆದರೆ ಇವುಗಳೆಲ್ಲದಕ್ಕೆ ಅಂತರಾರ್ಥ ಇದೆ.

ಇಲ್ಲಿ ಗೋಪಿಕೆಯರು ಎಂದರೆ ಪ್ರಜೆಗಳು ಎಂದರ್ಥ. ಹದಿನಾರು (16) ಸಾವಿರ ಜನ ಎಂದು ಹೇಳಲು ಕಾರಣ, ಆಗ ಭೂಮಿ ಮೇಲೆ ಜನಸಂಖ್ಯೆ ಇಂದಿನ ಹಾಗೆ ನೂರು ಕೋಟಿಗಳಲ್ಲ. ಆದ್ದರಿಂದ ಆಗ ಇರುವ ಜನಸಂಖ್ಯೆಯಲ್ಲಿ ಅಷ್ಟು ಜನ ಅವನನ್ನು ಅಭಿಮಾನಿಸುತ್ತಿದ್ದರೆಂದು ಹೇಳುವುದೇ ಇದರ ಅಂತರಾರ್ಥ. ಅಷ್ಟು ಜನ ಪ್ರಿಯತಮೆಯರು ಇದಾರೆಂದರೆ ಅವನನ್ನು ಎಷ್ಟು ಹೆಚ್ಚು ಜನ ಇಷ್ಟಪಡುತ್ತಿದ್ದರೆಂದು ಅರ್ಥ.

ಇಲ್ಲಿ ಶ್ರೀಕೃಷ್ಣ ಎಂದರೆ ನಾವೆಲ್ಲಾ ಊಹಿಸಿರುವ ರೂಪ ಅಲ್ಲ. "ಆತ್ಮ" ಎಂದು ಅರ್ಥಮಾಡಿಕೋಳ್ಳಬೇಕು. ಅವನು ಎಲ್ಲರೊಂದಿಗೆ ಇರುತ್ತಿದ್ದನು. ಅಂದರೆ ಆತ್ಮ ಎಲ್ಲರೊಂದಿಗೆ ತಾನೇ ಇರುತ್ತದೆ.

ಶ್ರೀಕೃಷ್ಣನು ತನ್ನ ವೇಣುಗಾನದಿಂದ ಅವರನ್ನೆಲ್ಲಾ ಮೈ ಮರೆಸುತ್ತಿರುವನು. ಅಂದರೆ ತನ್ನ ವೇಣುಗಾನ ಮಾಧುರ್ಯದಿಂದ ಧ್ಯಾನದಲ್ಲಿ ಅವರನ್ನೆಲ್ಲಾ ಕೊನೆಯಿಲ್ಲದ ಆನಂದ ಸ್ಥಿತಿಗೆ ತೆಗೆದುಕೊಂಡು ಹೋಗುತ್ತಿರುವವನೆಂದು ಇದರ ಅರ್ಥ.

ಅವರೆಲ್ಲಾ ಅವನೊಂದಿಗೆ ಇರುತ್ತಿರುವರೆಂದರೆ ಧ್ಯಾನದಲ್ಲಿ ಅವರಿಗೆ ಇನ್ನೊಂದು ಆಲೋಚನೆ, ಇನ್ನೊಬ್ಬರ ಬಗ್ಗೆ ಯೋಚನೆ ಇಲ್ಲ. ಅಂದರೆ ಧ್ಯಾನದಲ್ಲಿ ಆಲೋಚನೆಗಳು ಇಲ್ಲದ ಸ್ಥಿತಿಯಲ್ಲಿ ಆತ್ಮದೊಂದಿಗೆ ಇರುತ್ತಿದ್ದರೆಂದು, ಅಂದರೆ ದ್ಯಾನ ಧ್ಯಾನ ಮಾಡುತ್ತಿರುವರೆಂದು ಅವರಲ್ಲಿನ ಅಂತರಾರ್ಥ.

ಅಷ್ಟೇ ಅಲ್ಲ ಗೋಪಿಕೆಯರು ಎಷ್ಟೋತ್ತು ಶ್ರೀಕೃಷ್ಣನ ಬಗ್ಗೆ ಆಲೋಚನೆಗಳು ಮಾಡುತ್ತಾ, ಅವನು ಹೇಳಿದ ಮಾತುಗಳು ನೆನಪಿಸಿಕೋಳ್ಳುತ್ತಾ ಇರುತ್ತಾರೆಂದು ಅರ್ಥ ಅಂದಿನ ಪ್ರಜೆಗಳು ಎಷ್ಟೋತ್ತು ಆತ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸಿಕೋಳ್ಳುತ್ತಾ ಆತ್ಮಜ್ಞಾನವನ್ನು ಹೇಳಿಕೋಳ್ಳುತ್ತಾ, ಅದೇ ಪ್ರಸ್ತಾವನೆಯಿಂದ ಇರುತ್ತಿದ್ದರೆಂದು ಅರ್ಥ.

ಅಷ್ಟೇಅಲ್ಲ ಅಷ್ಟು ಜನ ಸ್ತ್ರೀಯರೊಂದಿಗೆ ಸೆಕ್ಸ್ ಮಾಡುತ್ತಿದ್ದನೆಂದು ಅಲ್ಲ. ಮೂರ್ಖ ಮಾನವರು, ಅಜ್ಞಾನದ ಮಾನವರು ವಿಪರೀತ ಅರ್ಥಗಳು ತೆಗೆದುಕೊಂಡು ಸತ್ಯವನ್ನು ಮರೆತು ವಕ್ರೀಕರಿಸುವುದೇ ಕೆಲಸವಾಗಿ ಇಟ್ಟುಕೊಂಡಿದ್ದಾರೆ.

ಜೀವನದಲ್ಲಿ ನಾವು ಬಯಸುವುದು ಆನಂದವೇ ಅಲ್ಲವೇ! ಆನಂದ ಎಲ್ಲಿ ಸಿಗುತ್ತದೆ? ಭಗವಂತನ ಹತ್ತಿರ, ಭಗವಂತನು ಯಾರು? 'ಆತ್ಮ' ಆದ್ದರಿಂದ ನಾವು ಭಗವಂತನೊಂದಿಗೆ ಅಂದರೆ ಆತ್ಮದ ಜೊತೆ ಇರುವುದಕ್ಕೆ ಪ್ರಯತ್ನಿಸಬೇಕು. ಅಂದರೆ ಧ್ಯಾನ ಮಾಡಬೇಕು. ಗೋಪಿಕೆಯರು ಶ್ರೀಕೃಷ್ಣನೊಂದಿಗೆ ಇರುವುದಕ್ಕೆ ಪ್ರಯತ್ನಿಸುತ್ತಿದ್ದರೆಂದು ಹೇಳುವುದರಲ್ಲಿ ಅರ್ಥ ಇದೆ. ಇದು ತಿಳಿಸದೇ, ಅಂದರೆ ಧ್ಯಾನ ಮಾಡಬೇಕೆನ್ನುವುದೇ ಅದರಲ್ಲಿನ ಅಂತರಾರ್ಥ.

ಎಷ್ಟು ಜನ ಶ್ರೀಕೃಷ್ಣನ ಜೊತೆ ಇರಲು ಪ್ರಯತ್ನಿಸಿದರೇ ಅಷ್ಟು ಜನರೊಂದಿಗೆ ಅವನು ಇರುತ್ತಾನೆ. ಅಂದರೆ ಅಷ್ಟು ಜನ ಧ್ಯಾನ ಮಾಡಿದರೇ ಅಷ್ಟು ಜನ ಆತ್ಮದೊಂದಿಗೆ ಇದ್ದಂತೆ ಅಲ್ಲವೇ? ಆದ್ದರಿಂದ ಶ್ರೀಕೃಷ್ಣನನ್ನು ಆತ್ಮ ಎಂದು ಭಾವಿಸಿದವರು ಇದು ಅರ್ಥ ಮಾಡಿಕೊಳ್ಳುತ್ತಾರೆ. ದೇಹವೆಂದು ಭಾವಿಸುವವರು ಅಪಾರ್ಥ ಮಾಡಿಕೋಳ್ಳುತ್ತಿದ್ದರು. ಎಲ್ಲಾ ನಮಗೆ ಇರುವ ಜ್ಞಾನದಂತೆ ಇರುತ್ತದೆ. ಅರ್ಥವಾಗುತ್ತದೆ.

ಹಾಗೇ ಬ್ರಹ್ಮರ್ಷಿ ಪತ್ರಿಯುವರಿಗೆ ಸಹ ಪ್ರಸ್ತೂತ ಎಷ್ಟೋ ಲಕ್ಷಜನ ಗೋಪಿಕೆಯರಿದ್ದಾರೆ. ಅಂದರೆ ಧ್ಯಾನಿಗಳಿದ್ದಾರೆ. ಅವರ ವೇಣುಗಾನದಿಂದ ಎಷ್ಟೋ ಲಕ್ಷಾಂತರ ಜನ ಧ್ಯಾನದಲ್ಲಿ ಆತ್ಮದೊಂದಿಗೆ ಇದ್ದು ನಿಜವಾದ ಆನಂದದಲ್ಲಿ ತೇಲುತ್ತಿದ್ದಾರೆ. ಇದರ ಮೂಲಕ ಗೋಪಿಕೆಯರ ಹಾಗೆ ನಾವು ಸಹ ಧ್ಯಾನ ಮಾಡಿ ಆನಂದ ಪಡೆಯಬೇಕೆನ್ನುವುದೇ ಈ ಸನ್ನಿವೇಶದ ಸಂದೇಶ.

# ಶ್ರೀಕೃಷ್ಣನು ಗೋವುಗಳನ್ನು ಕಾಯುವುದು



ಶ್ರೀಕೃಷ್ಣನು ಗೋವುಗಳನ್ನು ಕಾಯುತ್ತಿದ್ದನು. ಅವುಗಳನ್ನು ಪ್ರೀತಿಸುತ್ತಿದ್ದನು. ಅವುಗಳೊಂದಿಗೆ ಸ್ನೇಹ ಮಾಡುತ್ತಿದ್ದನು. ಅಂದರೆ ಅರ್ಥ ಅವನು ಸಕಲ ಜೀವಿಗಳನ್ನು ಅಂದರೇ ಸಮಸ್ತ ಜೀವಿಗಳನ್ನು ಪ್ರೀತಿಸುತ್ತಿದ್ದನು, ಸ್ನೇಹ ಮಾಡುತ್ತಿದ್ದನು.

ಅವನಿಗೆ ಮಾನವರೇ ಅಲ್ಲ ಸಕಲ ಜೀವಿಗಳು ಸಮಾನವೇ. ಕಾರಣ ಎಲ್ಲಾ ಅವನ ರೂಪಗಳಾಗಿದ್ದರಿಂದ. ಎಲ್ಲಾ ಅವನೇ ಆದ್ದರಿಂದ ಎಲ್ಲವನ್ನು ರಕ್ಷಿಸುವವನು, ಪ್ರೀತಿಸುವವನು, ಎಂದು ಹೇಳುವುದೇ ಈ ಸನ್ನಿವೇಶದಲ್ಲಿನ ಅರ್ಥ. ಹಾಗೇ ನಾವೂ ಸಹ ಎಲ್ಲಾ ಜೀವಿಗಳನ್ನು ಪ್ರೀತಿಸಬೇಕೆಂದು ತಿಳಿಯಬೇಕು. ಎಲ್ಲವುಗಳೊಂದಿಗೆ ಸ್ನೇಹ ಮಾಡಬೇಕು. ಹಾಗೆ ಸ್ನೇಹ ದರ್ಮವನ್ನು ಪಾಲಿಸಬೇಕೆಂದು ಹೇಳುವುದೇ ಈ ಸನ್ನಿವೇಶದ ಸಂದೇಶ.

ಗೋಪಾಲನು ಎಂದ ತಕ್ಷಣ ಗೋವುಗಳನ್ನು ಕಾಯುವವನು ಎಂದು ತಿಳಿಯುತ್ತೇವೆ. ಅಂದರೆ ಹಸುಗಳಿಗೆ ಆಹಾರ ನೀಡಿ ಅವುಗಳ ಪಾಲನೆ ಪೋಷಣೆ ಮಾಡುವವನೆಂದು ಭಾವಿಸುತ್ತೇವೆ. ಆದರೆ ಗೋಪಾಲನಿಗೆ ಇನ್ನೊಂದು ಅರ್ಥ ಸಹ ಇದೆ.

ಗೋ ಎಂದರೇ ಇಂದ್ರಿಯಗಳು ಎಂದರ್ಥ. ಗೋಪಾಲನು ಎಂದರೆ ಇಂದ್ರಿಯಗಳನ್ನು ಪಾಲಿಸುವವನು ಎಂದರ್ಥ. ಅಂದರೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡವನು ಎಂದು ಸಹ ಅರ್ಥ.

ಆದ್ದರಿಂದ ಯಾರು ತಮ್ಮ ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೋಳ್ಳುತ್ತಾರೋ ಅವರೇಲ್ಲಾ ಗೋಪಾಲರೇ. ಅಂದರೆ ನಾವೆಲ್ಲ ಗೋಪಾಲರಾಗಬೇಕು. ಅಂದರೆ ನಮ್ಮ ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಳ್ಳಬೇಕು.

ಹಾಗೆ ಇಂದ್ರಿಯಗಳನ್ನು ಹಿಡಿತದಲ್ಲಿ ಇಟ್ಟುಕೊಂಡವರು ಎಲ್ಲಾ ಜೀವನವನ್ನು

ಹಿಡಿತದಲ್ಲಿ ಇಟ್ಟುಕೊಂಡವರಾಗುತ್ತಾರೆ. ಮತ್ತೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟು ಕೋಳ್ಳಬೇಕೆಂದರೆ ಮನಸ್ಸನ್ನು ಹಿಡಿತದಲ್ಲಿಟ್ಟುಕೋಳ್ಳಬೇಕು. ಕಾರಣ ಇಂದ್ರಿಯಗಳೆಲ್ಲಾ ಮನಸ್ಸಿನ ಹಿಡಿತದಲ್ಲಿರುತ್ತವೆ.

ಮನಸ್ಸು ಹಿಡಿತದಲ್ಲಿ ಇರಬೇಕೆಂದರೆ ಧ್ಯಾನ ಮಾಡಬೇಕು. ಯಾರಾದರೇ ದ್ಯಾನ ಮಾಡುತ್ತಾರೋ ಅವರು ತಮ್ಮ ಇಂದ್ರಿಯಗಳ ಮೇಲೆ ಪೂರ್ತಿ ಹಿಡಿತ ಸಾಧಿಸಿರುತ್ತಾರೆ. ಅಂತಹವರೆಲ್ಲಾ ಗೋಪಾಲರೇ!

ಶ್ರೀಕೃಷ್ಣನು ಗೋವುಗಳನ್ನು ಹಿಡಿತದಲ್ಲಿಟ್ಟುಕೊಂಡಂತೆ ಮಾಡಿದಂತೆ ನಮ್ಮ ಇಂದ್ರಿಯಗಳನ್ನು ನಾವು ಹಿಡಿತ ಮಾಡಬೇಕೆಂದು ಹೇಳುವುದೇ ಈ ಸನ್ನಿವೇಶದ ಅರ್ಥ. ಅದೇ ನಮಗೆ ಕೊಡಲ್ಪಟ್ಟ ಸಂದೇಶ. ಆದ್ದರಿಂದ ಧ್ಯಾನ ಮಾಡಿರಿ, ಗೋಪಾಲರಾಗಿರಿ.






# ಶ್ರೀಕೃಷ್ಣನು ಗೋವರ್ಧನಗಿರಿ ಎತ್ತುವುದು



ಇಂದ್ರನು ದ್ವಾರಕವಾಸರಾದ ಯಾದವರ ಮೇಲೆ ಕೋಪಗೊಂಡು, ಅವರ ಮೇಲೆ ಕಲ್ಲಿನ ಮಳೆ ಬೀಳುವಂತೆ ಮಾಡಿದನು. ಆಗ ಶ್ರೀಕೃಷ್ಣನು ತನ್ನ ಕೈ ಕಿರುಬೆರಳಿಂದ ಗೋವರ್ಧನ ಗಿರಿಯಿಂದ ಪರ್ವತವನ್ನು ಎತ್ತಿ ದ್ವಾರಕಾವಾಸರನ್ನು, ಗೋವುಗಳನ್ನು ಸಮಸ್ತ ಜೀವರಾಶಿಯನ್ನು ಎಲ್ಲರನ್ನೂ ಕಲ್ಲಿನ ಮಳೆಯಿಂದ ಕಾಪಾಡಿದನು. ಕೊನೆಗೆ ಇಂದ್ರನು ಅವಮಾನಗೊಂಡನು.

ಈ ಸನ್ನಿವೇಶದ ಅರ್ಥ ಲೋಕಕಲ್ಯಾಣಕರವಾದ ಕೆಲಸಗಳನ್ನು ಮಾಡುವವರು, ಧರ್ಮವನ್ನು ಕಾಪಾಡುವವರು, ಎಂತಹ ಕಾರ್ಯವಾದರೂ ಸುಲಭವಾಗಿ ಮಾಡಬಲ್ಲರೆಂದು, ಅವರಿಗೆ ಇಂದು ಪರ್ವತವನ್ನು ಕಿರಿಬೆರೆಳಿಂದ ಎತ್ತುವಷ್ಟು ಸುಲಭವಾದ ವಿಷಯವೆಂದು ತಿಳಿಯಬೇಕಾ, ಯಾವ ಕೆಲಸ ಆದರೂ, ಯಾವ ಕಾರ್ಯವಾದರೂ, ಅದು ಎಷ್ಟು ಶ್ರೇಷ್ಠವಾಗಿದ್ದೇ ಆದರೂ, ಆ ಕೆಲಸವನ್ನು ಅವರು ಅತಿ ಸುಲಭವಾಗಿ ಮಾಡಬಲ್ಲರೆಂದು ಈ ಸನ್ನಿವೇಶದ ಅಂತರಾರ್ಥ.

ಅಚಿತಹವರು ಮಾಡುವ ಕೆಲಸಗಳಿಗೆ ಎಷ್ಟೇ ಕಷ್ಟಗಳು ಎದುರಾದರೂ ಎಷ್ಟೋ ಜನ ಎಷ್ಟೋ ಕಷ್ಟಗಳು ಕಲ್ಪಿಸಿದರೂ ಅವರನ್ನು ಏನೂ ಮಾಡಲಾರರೆಂದು ಅವರು ಕೈ ಹಿಡಿದ ಕಾರ್ಯ ನಿಲ್ಲುವುದಿಲ್ಲ ಎಂದು ಈ ಸನ್ನಿವೇಶದ ಅರ್ಥ. ಈ ಸನ್ನಿವೇಶದಲ್ಲಿ

ಇಂದ್ರನು ಕಲ್ಲಿನ ಮಳೆ ಸುರಿಸಿ ಎಷ್ಟೋ ಸಂಕಷ್ಟಗಳು ಕಲ್ಪಿಸಿದನು. ಏನೇ ಮಾಡಿದರೂ ಇಂದ್ರನು ಶ್ರೀಕೃಷ್ಣನನ್ನಾಗಲಿ, ಅವನನ್ನು ಆಶ್ರಯಿಸಿದವನನ್ನಾಗಲಿ ಏನೂ ಮಾಡಲು ಆಗಲಿಲ್ಲ. ಕೊನೆಗೆ ಸೋತು ಹೋದನು.

ಆದ್ದರಿಂದ ತಿಳಿಯಿರಿ ಲೋಕಕಲ್ಯಾಣಕರವಾದ ಕೆಲಸಗಳು ಮಾಡುವವರಿಗೆ, ಧರ್ಮವನ್ನು ಕಾಪಾಡುವವರಿಗೆ ಎಂತಹ ಕಾರ್ಯವಾದರೂ, ಎಂತಹ ದೊಡ್ಡ ಕಾರ್ಯವಾದರೂ ಅವರಿಗೆ ಕಿರುಬೆರಳಿನಿಂದ ಪರ್ವತ ಎತ್ತಿದ್ದಷ್ಟು ಸುಲಭ. ಅಷ್ಟು ಸುಲಭ ಎಂದು ತಿಳಿಯಬೇಕು. ಅಂತಹವರನ್ನು ಆಶ್ರಯಿಸಿದರೂ ಅವರಿಗೆ ಸಹ ಯಾರೂ ಎಂತಹ ಕೆಡಕು ಮಾಡಲಾರರೆಂದು ತಿಳಿಯಬೇಕು. ಅವರಿಗೆ ಯಾವ ಕಷ್ಟನಷ್ಟಗಳು ಆಗುವುದಿಲ್ಲವೆಂದು ತಿಳಿಯಬೇಕು.

ಈ ವಿಷಯ ನಾವು ಬ್ರಹ್ಮರ್ಷಿ ಪತ್ರಿಯವರನ್ನು ಗಮನಿಸಿದರೆ ನಮಗೆ ತಿಳಿಯುತ್ತದೆ. ಅವರು ಸಹ ಲೋಕದಲ್ಲಿ ಶಾಂತಿಯನ್ನು ಸ್ಥಾಪಿಸಲು, ಹಿಂಸೆಯಿಲ್ಲದೆ ಮಾಡಲು ಮಾನವರು ಸಕಲ ಸಮಸ್ಯೆಗಳಿಂದ ಹೊರಗೆ ಬರಲು ಧ್ಯಾನ ಮಾರ್ಗವನ್ನು ಪ್ರಪಂಚದಲ್ಲಿ ಪ್ರತಿಯೊಬ್ಬರಿಗೆ ಕೊಡಲು, ಜೀವಿಗಳ ಮೇಲೆ ಮಾಡುವ ಹಿಂಸೆಯನ್ನು ತಡೆಯಲು, ಸೃಷ್ಟಿ ಧರ್ಮಗಳನ್ನು ಎಲ್ಲರಿಗೂ ತಿಳಿಸಲು, ಎಷ್ಟೋ ಕಷ್ಟಪಡುತ್ತಿದ್ದಾರೆ. ಅವರು ಯಾರು ಊಹಿಸದಿರುವಷ್ಟು ಒಳ್ಳೆಯ ಕಾರ್ಯಗಳು ಮಾಡುತ್ತಿದ್ದಾರೆ. ಸಾಮಾನ್ಯರು ಆಶ್ಚರ್ಯಪಡುವಷ್ಟು ಧ್ಯಾನಯಜ್ಞಗಳು, ಪಿರಮಿಡ್ ನಿರ್ಮಾಣಗಳಂತಹ ಕಾರ್ಯಕ್ರಮಗಳು ಕೈಗೋಳ್ಳುತ್ತಿದ್ದಾರೆ. ಹಾಗೆ ಧರ್ಮ ಸ್ಥಾಪಿಸಲು ವಿಶೇಷವಾದ ಶ್ರಮ ಪಡುತ್ತಿದ್ದಾರೆ.

ಪತ್ರೀಜಿ ಯಾವ ಕಾರ್ಯ ಕೈಗೊಂಡರೂ, ಎಂತಹ ಶ್ರೇಷ್ಠ ಕಾರ್ಯ ತುಂಬಾ ಸುಲಭವಾಗಿ ಪೂರ್ತಿಮಾಡುತ್ತಿದ್ದಾರೆ. ಆ ಕಾರ್ಯ ಮಾಡುವಾಗ ಎಷ್ಟೋ ಕಷ್ಟಗಳು ಬರುತ್ತವೆ. ಏನೇ ಎದುರಾದರೂ, ಅವು ಅವರನ್ನು, ಅವರನ್ನು ಆಶ್ರಯಿಸಿದವರನ್ನು ಆಗಲಿ ಏನೂ ಮಾಡಲು ಆಗುತ್ತಿಲ್ಲ ಎನ್ನುವುದು ನಾವು ಪ್ರಸ್ತುತ ಪತ್ರಿಯವರನ್ನು ಗಮನಿಸಿದರೆ ತಿಳಿಯುತ್ತದೆ. ಅವರ ಕೈಯಲ್ಲಿ ಹಣ ಇಲ್ಲದಿದ್ದರೂ ಲೋಕಕಲ್ಯಾಣಕ್ಕಾಗಿ ಎಷ್ಟೋ ದೊಡ್ಡ ದೊಡ್ಡ ಪ್ರಾಜೆಕ್ಟ್‌ಗಳು, ದೊಡ್ಡ ಪಿರಮಿಡ್‌ಗಳು ನಿರ್ಮಿಸುತ್ತಿದ್ದಾರೆ. ಎಷ್ಟೋ ಲಕ್ಷ ಜನರಿಂದ ಧ್ಯಾನಯಜ್ಞಗಳನ್ನು ನಿರ್ವಹಿಸುತ್ತಿದ್ದಾರೆ. ಅವು ನಿರ್ಮಿಸುವಾಗ, ಅಂತಹ ಕಾರ್ಯಕ್ರಮಗಳು ನಿರ್ವಹಿಸುವಾಗ ಕೆಲವು ಜನರಿಂದ ಅವರಿಗೆ ಅಡ್ಡಿ ಉಂಟಾಗುತದೆ. ಅವರು ಎಷ್ಟೋ ಕಷ್ಟಗಳು ಎದುರಿಸಬೇಕಾಗುತ್ತಿದೆ. ಆದರೆ ಅವುಗಳನ್ನೆಲ್ಲ ಅವರು ಶ್ರೀಕೃಷ್ಣನು ಕಿರುಬೆರಳಿನಿಂದ ಗೋವರ್ಧನ ಗಿರಿಯನ್ನು ಎತ್ತಿದಷ್ಟು

ಸುಲಭವಾಗಿ ಪರಿಷ್ಕರಿಸುತ್ತಿದ್ದಾರೆ. ಪತ್ರಿಯವರನ್ನು ಗಮನಿಸಿದರೆ ಈ ಸನ್ನಿವೇಶದಲ್ಲಿನ ಸಂದೇಶ ನಮಗೆ ಅರ್ಥವಾಗುತ್ತದೆ. ಆದ್ದರಿಂದ ನಾವು ಸಹ ಧರ್ಮದಿಂದ ಜೀವಿಸೋಣ. ಧರ್ಮವನ್ನು ಕಾಪಾಡೋಣ.

# ಶ್ರೀಕೃಷ್ಣನು ಚಾಣೂರ - ಮುಷ್ಠಿಕರೆಂಬ ಮಲ್ಲರನ್ನು ಸೋಲಿಸುವುದು ಮದ ತುಂಬಿದ ಆನೆಯನ್ನು ನೆಲಕ್ಕುರುಳಿಸುವುದು





ಶ್ರೀಕೃಷ್ಣ ಬಲರಾಮರು, ರಾಕ್ಷಸ ರಾಜನಾದ ಕಂಸನನ್ನು ಸಾಯಿಸಿ ಧರ್ಮವನ್ನು ಸ್ಥಾಪಿಸುವ ಪ್ರಯತ್ನದಲ್ಲಿ ಕಂಸನ ಕೋಟೆಗೆ ಪ್ರವೇಶಿಸಿದರು ಅವರನ್ನು ಕಂಸನು ತನ್ನ ರಾಜ ಕೋಟೆಗೆ ಬರದಂತೆ ಮಾಡಲು, ಅವರನ್ನು ಸಾಯಿಸಲು ಅಪಾರ ಬಲಸಂಪನ್ನರಾದ ಚಾಣೂರ, ಮುಷ್ಠಿಕರೆಂಬ ಮಲ್ಲಯುದ್ಧವೀರರನ್ನು ಪ್ರಯೋಗಿಸಿದನು. ಆದರೆ ಅವರನ್ನು ಶ್ರೀಕೃಷ್ಣ ಬಲರಾಮರು ಸುಲಭವಾಗಿ ಸೋಲಿಸಿದರು. ಹಾಗೆ ಮತ್ತು ತುಂಬಿದ ಮದಗಜವನ್ನು ಸಹ ಶ್ರೀಕೃಷ್ಣ ಬಲರಾಮರ ಮೇಲೆ ಪ್ರಯೋಗಿಸಿದನು. ಆದರೆ ಆ ಮದಗಜವನ್ನೂ ಸಹ ಶ್ರೀಕೃಷ್ಣನು ನೆಲಕ್ಕುರುಳಿಸಿದನು.

ಅಂದರೆ ಇದರ ಅರ್ಥ ಲೋಕದಲ್ಲಿ ಧರ್ಮಗಳು ಕಾಪಾಡುವ ಪ್ರಯತ್ನ ಮಾಡುವವರಿಗೆ ಎಷ್ಟೋ ಅಡ್ಡಿ ಎದುರಾಗುತ್ತವೆ. ಎಷ್ಟೋ ಕಷ್ಟಗಳು ಎದುರಿಸಬೇಕಾಗಿ ಬರುತ್ತದೆ. ಆದರೆ ಅವು ಎಂತಹವಾದರೂ, ಬಲವಂತವಾದರೂ ಅವುಗಳನ್ನು ಅವರು ಅತಿ ಸುಲಭವಾಗಿ ಅಧಿಗಮಿಸುತ್ತಾರೆ ಎಂದು ತಿಳಿಸುವುದೇ ಈ ಸನ್ನಿವೇಶಗಳ ಅಂತರಾರ್ಥ. ಆದ್ದರಿಂದ ನಾವೂ ಸಹ ಧರ್ಮವನ್ನು ಅನುಸರಿಸಬೇಕು, ಧರ್ಮವನ್ನು ಕಾಪಾಡುವ ಪ್ರಯತ್ನ ಮಾಡಬೇಕೆಂದು, ಆಗ ನಮ್ಮ ಜೀವನದಲ್ಲಿ ಸಹ ಎಷ್ಟೋ ಕಷ್ಟಗಳು ಎದುರಾದರೂ, ನಾವು ಸಹ ಸುಲಭವಾಗಿ ಪರಿಷ್ಕರಿಸುತ್ತೇವೆನ್ನುವುದೇ ಇದರ ಸಂದೇಶ.

# ಕಂಸನನ್ನು ಸಂಹರಿಸುವುದು



ರಾಕ್ಷಸ ಗುಣಗಳು ತುಂಬಿದ ರಾಜನಾದ ಕಂಸನು ಎಷ್ಟು ಕುತಂತ್ರಗಳು ಪ್ರದರ್ಶಿಸಿದರೂ, ಎಷ್ಟು ಮಾಯೋಪಾಯಗಳು ಮಾಡಿದರೂ ಕೊನೆಗೆ ಶ್ರೀಕೃಷ್ಣನು ಕಂಸನನ್ನು ಸಂಹರಿಸಿದನು. ಇದರಲ್ಲಿ ಅಂತರಾರ್ಥ ಹೀಗಿದೆ.

ಕಂಸನು ಶ್ರೀಕೃಷ್ಣನಿಗೆ ಹತ್ತಿರದ ಸಂಬಂಧಿ. ಸ್ವತಃ ಸೋದರ ಮಾವ ಆದರೂ ಸರಿ ಶ್ರೀಕೃಷ್ಣನು ಶಿಕ್ಷಿಸಿದನು. ಇದರಲ್ಲಿರುವ ಸಂದೇಶವೇನೆಂದರೆ ಭಗವಂತನಿಗೆ ರಾಗ ದ್ವೇಷಗಳು ಇರುವುದಿಲ್ಲವೆಂದು ಅವನಿಗೆ ಎಲ್ಲರೂ ಸಮಾನವೆಂದು, ಅವನನಿಗೆ ತನ್ನವರು, ಹತ್ತಿರದವರೆಂದು ಅನುರಾಗ, ಇತರರೆಂದು ದ್ವೇಷ ಇರುವುದಿಲ್ಲವೆಂದು, ನಾವು ತಿಳಿಯಬಹುದು. ಅಷ್ಟೇ ಅಲ್ಲ ಅವರು ಎಂತಹವರಾದರೂ, ತಪ್ಪು ಮಾಡಿದರೆ ರಾಕ್ಷಸವಾಗಿ ವರ್ತಿಸಿದರೆ, ಧರ್ಮವನ್ನು ತಪ್ಪಿದರೆ, ಶಿಕ್ಷಿಸಲ್ಪಡುತ್ತಾರೆಂದು ಸಹ ತಿಳಿಯಬಹುದು.

ಏಕೆಂದರೆ ತುಂಬಾ ಜನ ಶ್ರೀಕೃಷ್ಣನ ಮೂರ್ತಿಗೆ ಪೂಜೆಗಳು ಮಾಡುತ್ತಾ,

ಭಜನೆಗಳನ್ನು ಮಾಡುತ್ತಾ, ತಾವು ಶ್ರೀಕೃಷ್ಣ ಭಗವಾನನಿಗೆ ಹತ್ತಿರವಾದಂತೆ ಭಾವಿಸುತ್ತಾರೆ. ಹಾಗೆ ನಾವುಗಳು ಇಟ್ಕೊಂಡ ಉಂಗುರಗಳು ಧರಿಸಿ, ತಾನು ಕೃಷ್ಣನಿಗೆ ಇಷ್ಟವಾದನೆಂದು ಭಾವಿಸುತ್ತಾರೆ. ಅಷ್ಟೇ ಅಲ್ಲ ತಾವು ಹಿಂದೂ ಆಗಿರುವುದುರಿಂದ ತಾನೆಂದರೆ ಶ್ರೀಕೃಷ್ಣನು ಇಷ್ಟಪಡುತ್ತಾನೆಂದು ಭಾವಿಸುತ್ತಾರೆ. ತಾವು ಹೇಗೆ ಪ್ರವರ್ತಿಸಿ ಪೂಜೆಗಳು, ಭಜನೆಗಳು, ಪಾರಾಯಣೆಗಳು ಮಾಡುತ್ತಿರುವುದರಿಂದ ಅವರು ನಮ್ಮನ್ನು ರಕ್ಷಿಸುತ್ತೆರೆಂದು, ಏನು ಮಾಡುವುದಿಲ್ಲವೆಂದು ತಿಳಿಯುತ್ತಾರೆ.

ಆದರೆ ಮೇಲಿನ ಸನ್ನಿವೇಶದಿಂದ ಭಗವಾನನಿಗೆ ಎಲ್ಲರೂ ಸಮಾನರೆಂದು ತಿಳಿಯಬೇಕು. ಅವರು ಹಿಂದುವಾದರೂ ಸರಿ, ಎಷ್ಟು ಪೂಜೆಗಳು ಮಾಡಿದರೂ, ಪ್ರಾರ್ಥನೆಗಳು, ಭಜನೆಗಳು ಮಾಡಿದರೂ, ದುರ್ಮಾರ್ಗವಾಗಿ, ರಾಕ್ಷಸವಾಗಿ ವರ್ತಿಸಿದರೆ ಅಂದರೆ ಇತರರನ್ನು ಇತರ ಜೀವಿಗಳನ್ನು ಹಿಂಸಿಸಿ, ಧರ್ಮ ವಿರುದ್ಧವಾಗಿ ವರ್ತಿಸಿದರೆ ಕಠಿಣವಾಗಿ ಶಿಕ್ಷಿಸಲ್ಪಡುತ್ತಾರೆಂದು ತಿಳಿಯಬೇಕು. ಆದರೆ ಅವರು ಹಿಂದುಗಳು ಆಗದಿದ್ದರೂ, ಪೂಜೆಗಳನ್ನು ಮಾಡದಿದ್ದರೂ, ಭಜನೆಗಳು ಮಾಡದಿದ್ದರೂ, ಪ್ರಾರ್ಥನೆಗಳು ಮಾಡದಿದ್ದರೂ, ಆರತಿ ಕೊಡದಿದ್ದರೂ, ನಾಮಗಳು, ವಿಭೂತಿಗಳು, ಧರಿಸದಿದ್ದರೂ, ದಾರ ಉಂಗುರಗಳು ದರಿಸದಿದ್ದರೂ... ಅವರೇ ಏನಾದರು ಅಹಿಂಸೆ ಪಾಲಿಸುತ್ತಾ ನ್ಯಾಯವಾಗಿ, ಧರ್ಮವಾಗಿ ವರ್ತಿಸಿದರೆ, ಒಳ್ಳೆಯದನ್ನು ಮಾಡುತ್ತಿದ್ದರೆ ಅವರು ಖಂಡಿತವಾಗಿ ರಕ್ಷಿಸಲ್ಪಡುತ್ತಾರೆಂದು ತಿಳಿಸುವುದೇ ಈ ಸನ್ನಿವೇಶದಲ್ಲಿರುವ ಅಂತರಾರ್ಥ.

ಆದ್ದರಿಂದ ಭಗವಂತನಿಗೆ ಎಲ್ಲರೂ ಒಂದೇ ಎಂದು ತಿಳಿಯಬೇಕು. ಅವನಿಗೆ ಸ್ವಪರ ಬೇಧವಿಲ್ಲ. ರಾಗದ್ವೇಶಗಳಿಲ್ಲ ಕಾರಣ ಎಲ್ಲಾ, ಎಲ್ಲಾರೂ ಅವನ ರೂಪಗಳೇ ಆಗಿದ್ದರಿಂದ. ಅಷ್ಟೇ ಹೊರತು ತಾವು ಹಿಂದು ಎಂದು ಪೂಜೆಗಳು ಮಾಡುತ್ತಿರುವೆನೆಂದು ತಪ್ಪು, ಪಾಪಗಳು ಮಾಡಿದರೆ ಶಿಕ್ಷೆ ತಪ್ಪುವುದಿಲ್ಲ. ಅಂದರೆ ಕಷ್ಟಗಳು ತಪ್ಪುವುದಿಲ್ಲ ಎಂದು ತಿಳಿಯಬೇಕು. ಅದೇ ಈ ಸನ್ನಿವೇಶದಲ್ಲಿರುವ ಅಂತರಾರ್ಥ. ನಾವು ಹಾಗೇ ವರ್ತಿಸಬಾರದೆಂದು ಹೇಳುವುದೇ ಅದರಲ್ಲಿರುವ ಸಂದೇಶ.



# ಶಿಶುಪಾಲನ 100 ತಪ್ಪುಗಳು ಕ್ಷಮಿಸುವುದು



ಶ್ರೀಕೃಷ್ಣ ಭಗವಾನನು ಶಿಶುಪಾಲನು ಎಷ್ಟು ತಪ್ಪುಗಳು ಮಾಡಿದರೂ ಸುಮ್ಮನಿದ್ದನು. ಹಾಗೇ 100 ತಪ್ಪುಗಳವರೆಗೂ ಕ್ಷಮಿಸಿದನು. ಆದರೆ 100 ತಪ್ಪುಗಳು ಮಾಡಿದ ನಂತರ ಸುಮ್ಮನಿರಲಿಲ್ಲ. ಶಿಶುಪಾಲನನ್ನು ಶಿಕ್ಷಿಸಿದನು. ಶಿರಸ್ಸನ್ನು ಖಂಡಿಸಿದನು.

ಈ ಸನ್ನಿವೇಶದ ಅರ್ಥವೇನೆಂದರೆ ಈ ಸೃಷ್ಟಿಯಲ್ಲಿ ಒಂದು ಧರ್ಮ ಸೂಕ್ಷ್ಮವಿದೆ.

ಅದೇನೆಂದರೆ! **"ಯಾರಿಗಾದರೂ ಪಾಪ ಮಾಡಿದ ತಕ್ಷಣ ಕಷ್ಟ ಬರುವುದಿಲ್ಲ ಅಂದರೆ ಶಿಕ್ಷೆಬೀಳುವುದಿಲ್ಲ. ಪಾಪ ಬಯಲಾದರೇನೆ ಶಿಕ್ಷೆ ಬೀಳುತ್ತದೆ. ಅಂದರೆ ಕಷ್ಟ ಬರುತ್ತದೆ".**

ಪಾಪ ಎಂದರೆ ಸೃಷ್ಟಿ ವಿರುದ್ಧವಾದ, ಧರ್ಮವಿರುದ್ಧವಾದ, ಕರ್ಮಗಳೇ ಪಾಪ ಎನ್ನುತ್ತಾರೆ. ನೆನಪಿಟ್ಟುಕೋಳ್ಳಿ, ನಾವೆಲ್ಲಾ ಈ ಸೃಷ್ಟಿಯಲ್ಲಿ ಇದ್ದೇವೆ. ಹಾಗೆ ಈ ಸೃಷ್ಟಿಯನ್ನು ಸೃಷ್ಟಿ ಮಾಡಿದ ಸೃಷ್ಟಿ ಕರ್ತ ಸಹ ಇದ್ದಾನೆ. ಅವನನ್ನೇ ಎಲ್ಲರು ತರತರಹದ ಹೆಸರುಗಳಿಂದ ಕರೆಯುತ್ತಿದ್ದಾರೆ. ಮುಸ್ಲಿಂರು "ಅಲ್ಲ" ಎನ್ನುವರು. ಕ್ರಿಸ್ಟಿಯನ್ನರು "ತಂದೆ" ಎನ್ನುವರು. ಹಿಂದೂಗಳು "ಭಗವಂತ" "ಪರಮಾತ್ಮ" "ಆದಿಶಕ್ತಿ" "ಪರಾಶಕ್ತಿ" "ಪರಮೇಶ್ವರ" "ವಿಶ್ವಾತ್ಮ" ಎನ್ನುವರು

ಅಷ್ಟೇ ಅಲ್ಲ ಆ ಭಗವಂತನು ತನ್ನ ಸೃಷ್ಟಿಯಲ್ಲಿ ತನ್ನಿಂದ ಸೃಷ್ಟಿಸಲ್ಪಟ್ಟ ಸಮಸ್ತ ಜೀವಿಗಳು, ಮಾನವರು ಎಲ್ಲರೂ ಸಹ ಸಂತೋಷ, ಸುಖಶಾಂತಿಯಿಂದ ಜೀವಿಸಲು, ಯಾರು ಯಾರನ್ನು ಹಿಂಸಿಸದೆ, ಭಾದಿಸದೇ, ಇರುವುದಕ್ಕೆ ನಷ್ಟಪಡಸದೆ, ಕಷ್ಟಪಡಿಸದೆ ಇರುವುದಕ್ಕೆ ಅವನು ಈ ಸೃಷ್ಟಿಯಲ್ಲಿ ಕೆಲವು ನಿಯಮಗಳು ಏರ್ಪಾಡು ಮಾಡಿದ್ದಾನೆ. ಆ ನಿಯಮಗಳನ್ನೇ 'ಧರ್ಮಗಳು' ಎಂದರು.

ಹಾಗೆ ಯಾರಾದರೂ ಆ ನಿಯಮಗಳು ಉಲ್ಲಂಘಿಸಿದರೂ! ಅಂದರೆ ಅತಿಕ್ರಮಿಸಿದರೂ! ಅಂದರೆ ಸೃಷ್ಟಿ ವಿರುದ್ಧವಾಗಿ ಪ್ರವರ್ತಿಸಿದರೂ! ಅಂದರೆ ತಮ್ಮಿಂದ ಈ ಸೃಷ್ಟಿಯಲ್ಲಿನ ಇತರೆ ಜೀವಿಗಳಿಗೆ. ಪ್ರಾಣಿಗಳಿಗೆ ನಷ್ಟ, ಕಷ್ಟ, ಉಂಟು ಮಾಡಿದರೂ! ಅವರಿಗೆ ಸೃಷ್ಟಿಧರ್ಮದ ಸೂಕ್ಷ್ಮದ ಪ್ರಕಾರ ಶಿಕ್ಷೆಗಳು ಆಗುತ್ತವೆಂದು ತಿಳಿಯಬೇಕು. ಆ ಶಿಕ್ಷೆಗಳನ್ನೇ ನಾವು ಕಷ್ಟಗಳು ಎನ್ನುತ್ತೇವೆ. ನೆನಪಿಟ್ಟುಕೋಳ್ಳಿ. "ನಮಗೆ ಕಷ್ಟಗಳು ಬಂದಿವೆ ಅಂದರೆ ಈ ಸೃಷ್ಟಿ ನಿಯಮಗಳನ್ನು ಅನುಸರಿಸಿ ಶಿಕ್ಷೆಗಳು ಆಗುತ್ತವೆ ಎಂದರ್ಥ". ಆಲೋಚಿಸಿರಿ. ನಮಗೆ ಕಷ್ಟ ಏಕೆ ಬಂದಿದೆ? ಅಂದರೆ ನಾವು ಯಾರನ್ನೋ ಹಿಂಸಿಸಿದ್ದೇವೆಂದು, ಅರ್ಥ. ಸೃಷ್ಟಿ ಧರ್ಮಕ್ಕೆ ವಿರುದ್ಧವಾಗಿ ವರ್ತಿಸಿದ್ದೇವೆಂದೆ ಅರ್ಥ.

ತಿಳಿಯಿರಿ ಯಾವ ಕಷ್ಟವಾದರೂ, ಅನಾರೋಗ್ಯವಾದರೂ, ಸಮಸ್ಯೆ ಆದರೂ, ಪಾಪ ಮಾಡಿದ ತಕ್ಷಣ ಬರುವುದಿಲ್ಲ. ಏನೇ ಆದರೂ ಸೃಷ್ಟಿಯ ಮತ್ತೊಂದು ಧರ್ಮಸೂಕ್ಷ್ಮದ ಪ್ರಕಾರ ಬರುತ್ತದೆ. ಅದನ್ನೇ ಪಾಪ ಎನ್ನುವರು. ಏಕೆಂದರೆ ಈ ಸೃಷ್ಟಿಯಲ್ಲಿ "ಪಾಪ ಮಾಡಿದ ತಕ್ಷಣ ಶಿಕ್ಷೆ ಬರುವುದಿಲ್ಲ. ಆ ಪಾಪ ಬಯಲಾದ ಶಿಕ್ಷೆ ಬೀಳುತ್ತದೆ".

ಕಾರಣ ತಪ್ಪು ಮಾಡಿದ ಪ್ರತಿಯೊಬ್ಬರಿಗೆ ಅವಕಾಶ ಕೊಡಲ್ಪಡುತ್ತದೆ. ಕಾರಣ ತನ್ನ ತಪ್ಪನ್ನು ತಿಳಿಯುತ್ತಾರೆಂದು, ತಪ್ಪನ್ನು ಸರಿಪಡಿಸಿಕೋಳ್ಳುತ್ತಾರೆಂದು, ಆದರೆ ಯಾರಾದರೂ ತನ್ನ ತಪ್ಪು ತಿಳಿಯದೇ ಆ ತಪ್ಪನ್ನು ಬೀಡದೆ... ಮತ್ತೆ ಮತ್ತೆ ಮಾಡುತ್ತಿದ್ದರೆ, ತನ್ನ ವರ್ತನೆ ಬದಲಿಸಿಕೊಳ್ಳದಿದ್ದರೆ! ತಪ್ಪನ್ನು ಅವನಿಗೆ ತಿಳಿಸಲು, ಅವನ ವರ್ತನೆಯಲ್ಲಿ ಬದಲಾವಣೆ ತೆಗೆದುಕೊಂಡು ಬರಲು ತಕ್ಕ ಶಿಕ್ಷೆ ಆಗುತ್ತದೆ. ಅಂದರೆ ತಪ್ಪುಗಳು ಮಾಡುವುದಕ್ಕೆ, ಹಿಂಸೆ ಮಾಡುವುದಕ್ಕೆ, ಸಹ ಪರಿಮಿತಿಯಿದೆ. ಆ ಪರಿಮಿತಿ ದಾಟುವುದಕ್ಕೆ 'ಪಾಪ ಬದಲಾಗಿದೆ' ಎನ್ನುತ್ತಾರೆ.

ಈ ವಿಷಯವನ್ನೇ ಶಿಶುಪಾಲನಾ ಸನ್ನಿವೇಶದ ಮೂಲಕ ಲೋಕಕ್ಕೆ ತಿಳಿಯಪಡಿಸಲಾಗಿದೆ. ಶಿಶುಪಾಲನು ಭಗವಾನನನ್ನು ದೂಷಿಸಿ ಅವಮಾನಿಸಿದನು. ಆದರೆ ಭಗವಂತನು

ಏನು ಮಾಡಿಲ್ಲ. ಕಾರಣ ಅದು ಮೊದಲ ತಪ್ಪಾಗಿದ್ದರಿಂದ ಆದರೆ ಶಿಶುಪಾಲನು ಇದು ತಿಳಿಯದೇ! ಗರ್ವಿಸಿದನು. ಶ್ರೀಕೃಷ್ಣನು ಏನು ಮಾಡುತ್ತಾನೆ ಎಂದುಕೊಂಡನು ಮತ್ತೆ ಮತ್ತೆ ದೂಷಿಸಿದನು. ಅವಮಾನಿಸಿದನು. ಆದರೆ ಭಗವಂತನು ಏನೂ ಮಾತನಾಡಲಿಲ್ಲ. ಏನು ಮಾಡಿಲ್ಲ ಸಹನೆಯಿಂದಿದ್ದನು. ಶಿಶುಪಾಲನು ಇನ್ನೂ ಅತಿ ಮಾಡಿದನು. ನನ್ನನ್ನು ಯಾರೂ ಏನೂ ಮಾಡಲಾರರು ಎಂದು ತಿಳಿದನು. ನಾನೇ ಶ್ರೇಷ್ಠ ನಾನೇನೇ ಮಾಡಿದರೂ ಪರವಾಗಿಲ್ಲ, ನನ್ನಿಷ್ಟ ಎಂದು ತಿಳಿದನು. ಹಾಗೆ ಭಗವಂತನನ್ನು ದೂಷಿಸುತ್ತಾ ತಪ್ಪುಗಳನ್ನು ಮಾಡುತ್ತಲೇ ಇದ್ದನು. ಹಾಗೇ 99 ತಪ್ಪುಗಳವರೆಗೂ ಭಗವಂತನು ಸುಮ್ಮನಿದ್ದನು, ಸಹಿಸಿದ. ಇದು ಶಿಶುಪಾಲನು ಗ್ರಹಿಸಿಲ್ಲ, ಹಾಗೇ 100ನೇ ತಪ್ಪು ಸಹ ಮಾಡಿದನು. ಇನ್ನು ಭಗವಂತನು ಸುಮ್ಮನಿರಲಿಲ್ಲ, ಕೊಟ್ಟ ಅವಕಾಶ ಶಿಶುಪಾಲನು ಉಪಯೋಗಿಸಿಕೊಂಡಿಲ್ಲ. ಅವನಿಗೆ ಬುದ್ಧಿ ಹೇಳಲು ಅವನ ತಪ್ಪು ಅವನಿಗೆ ತಿಳಿಸಲು ತಕ್ಷಣ ಶಿಕ್ಷಿಸಿದನು. ಅವನ ಶಿರಸ್ಸು ಖಂಡಿಸಿದನು. ಭಗವಂತನು 100 ತಪ್ಪುಗಳವರೆಗೂ ಸುಮ್ಮನಿದ್ದನು ಅಂದರೆ ಅವಕಾಶ ಕೊಟ್ಟನು ಎಂದರ್ಥ. ಅಂದರೆ ಅಲ್ಲಿಯವರೆಗೂ ಅವನ "ಪಾಪದ ಕೊಡತುಂಬಿಲ್ಲ" ಎಂದರ್ಥ. ಮತ್ತೆ 100 ತಪ್ಪುಗಳಿಗೆ ಶಿಕ್ಷಿಸಿದನು ಎಂದರೆ ಕೊಟ್ಟ ಅವಕಾಶ ಕಳೆದುಕೊಂಡನು. ಅಂದರೆ "ಪಾಪದ ಕೊಡ ತುಂಬಿತು" ಎಂದರ್ಥ. ಅಂದರೆ ಅವನು ಕ್ಷಮಾಪಣೆಗೆ ಅರ್ಹನಲ್ಲ ಶಿಕ್ಷೆಗೆ ಅರ್ಹನಾದನು. ಈ ಸನ್ನಿವೇಶದ ಅರ್ಥ, ಯಾರಾದರೂ ಪಾಪ ಕರ್ಮಗಳು ಕೆಲವು ಕಾಲ ಮಾಡಬಹುದು. ಎಲ್ಲರಿಗೂ ಅಂದರೆ "ಪಾಪ ಬಯಲಾಗುವವರೆಗೂ", ಪಾಪದ ಕೊಡ ತುಂಬಿದರೆ ಈ ಸೃಷ್ಟಿಯಲ್ಲಿ ಅವರು ಯಾರೇ ಆದರೂ, ಎಷ್ಟು ಶ್ರೇಷ್ಠರಾದರೂ, ಧನವಂತರಾದರೂ, ಮಂತ್ರಿಗಳಾದರೂ, ಶಿಕ್ಷೆ ಅನುಭವಿಸಲೇಬೇಕು. ಅಂದರೆ ಕಷ್ಟಗಳ ಪಾಲಾಗಬೇಕು ಎನ್ನುವುದೇ ಈ ಸನ್ನಿವೇಶದ ಸಂದೇಶ

ನೋಡಿ ತುಂಬಾ ಜನ ತಮ್ಮ ಶಕ್ತಿಯನ್ನು ನೋಡಿಕೊಂಡು, ಶಕ್ತಿ ಅಂದರೆ ಶಾರೀರಿಕ ಬಲವಾದರೂ, ಧನ ಬಲವಾದರೂ, ಅದು ನೋಡಿಕೊಂಡು ಗರ್ವದಿಂದ, ಅಹಂಕಾರದಿಂದ, ತಮ್ಮ ಕೆಳಗೆವರನ್ನು ನೋಯಿಸಿದರೂ, ಮೋಸ ಮಾಡಿದರೂ, ಜೀವಿಗಳನ್ನು ಹಿಂಸಿಸಿದರೂ, ಸಾಯಿಸಿ ಅವುಗಳ ಮಾಂಸವನ್ನು ತಿಂದರೂ, ಹಾಗೇ ಸೃಷ್ಟಿ ಧರ್ಮಕ್ಕೆ ವಿರುದ್ಧವಾಗಿ ವರ್ತಿಸಿದರೂ, ಅವರೆಲ್ಲಾ ಸೃಷ್ಟಿ ಧರ್ಮದ ಪ್ರಕಾರ ಶಿಕ್ಷೆಗೆ ಒಳಗಾಗಿ, ಕಷ್ಟಗಳ ಪಾಲಾಗುತ್ತಾರೆ.

ಆದರೆ ನಾವು ಗಮನಿಸಿದರೆ ಹಾಗೆ ವರ್ತಿಸುವವರಿಗೆ ಮೊದಲಿಗೆ ಏನೂ ಆಗುವುದಿಲ್ಲ, ಅವರು ಎಷ್ಟು ಹಿಂಸೆಗಳು ಮಾಡಿದರೂ, ಎಷ್ಟು ಪಾಪಗಳು ಮಾಡಿದರೂ ಸಹ ಏನೂ ಆಗುವುದಿಲ್ಲ. ಆದ್ದರಿಂದ ಅವರು ಗರ್ವಿಸುತ್ತಿದ್ದಾರೆ. ಇನ್ನೂ ಜಾಸ್ತಿ ಮಾಡಿದನು ಅದಕ್ಕೆ ಕಾರಣ ಅವರಿಗೆ ಸೃಷ್ಟಿ ಧರ್ಮಗಳ ಸೂಕ್ಷ್ಮದ ಬಗ್ಗೆ ಅವಗಾಹನೆಯಿಲ್ಲದಿರುವುದು. ಕಾರಣ ಅವರಿಗೆ ತಾವು ಈ ಸೃಷ್ಟಿಯಲ್ಲಿ ಇದ್ದೇನೆಂಬ ತಿಳುವಳಿಕೆಯಿಲ್ಲದಿರುವುದು. ಎಷ್ಟೋತ್ತೂ ತನಗೆ ಶಕ್ತಿ ಇದೆ ಆದ್ದರಿಂದ ಏನೇ ಮಾಡಿದರೂ ನಡೆಯುತ್ತದೆ. ಹೇಗೆ ವರ್ತಿಸಿದರೂ ಯಾರು ಏನು ಮಾಡತ್ತಾರೆ? ಎಂದು ಶಿಶುಪಾಲನ ಹಾಗೆ ಅಹಂಕಾರದಿಂದ ಇರುವುದೇ?

ನೋಡಿ ಒಂದು ಕೋಳಿಯನ್ನು ತಿಂದವರಿಗೆ ಕಷ್ಟ ಬರುತ್ತದಾ? ಬರುವುದಿಲ್ಲ. 10

ಕೋಳಿ ತಿಂದರೂ ಬರುವುದಿಲ್ಲ, 50 ತಿಂದರೂ ಬರುವುದಿಲ್ಲ, 99 ತಿಂದರೂ ಬರುವುದಿಲ್ಲ, ಹಾಗೇ ತಿನ್ನುತ್ತಾ ಏನೆನ್ನುತ್ತಾರೆಂದರೆ? ತಿಂದರೆ ಏನಾಗುತ್ತದೆ? ಬೇಕಾದರೆ ಇನ್ನೂ ತಿಂತೇನೆ ಎನ್ನುತ್ತಾರೆ. ಹಾಗೆ ತಿನ್ನುತ್ತಾ, ತಿನ್ನುತ್ತಾ, ಪಾಪ ಬಯಲಾದ ತಕ್ಷಣ ಶಿಕ್ಷೆ ಬೀಳುತ್ತದೆ. ಅಂದರೆ ಯಾವುದೋ ಆಕ್ಸಿಡೆಂಟ್ ಆಗಿ ಕಾಲೋ, ಕೈಯೋ, ಮುರಿಯುತ್ತವೆ. ರೋಗ ಬರುತ್ತದೆ. ಬೆಂಕಿಯಲ್ಲಿ ಸುಡುತ್ತಾರೆ. ಆಗ ಅವರು ಅತ್ತರೂ ಪ್ರಯೋಜನವಿಲ್ಲ.

ಅದಕ್ಕೆ ನೋಡಿ ತುಂಬಾ ಜನಕ್ಕೆ ವೃದ್ಧಾಪ್ಯದಲ್ಲಿ ತುಂಬಾ ಕಷ್ಟಗಳು ಬರುತ್ತವೆ. ಅಂದರೆ ರೋಗಗಳು ಬರುತ್ತವೆ. ಭರಿಸಲಾಗದ ರೋಗಗಳು ಬರುತ್ತವೆ. ಕಾರಣ ಅವರು ಯೌವನದಲ್ಲಿ ಏನೂ ಆಲೋಚಿಸದೆ ಯೌವನ ಗರ್ವದಿಂದ ಮಾಡಿದ ಪಾಪಗಳೇ ವೃದ್ಧಾಪ್ಯದಲ್ಲಿ ಬಯಲಾಗುತ್ತವೆ. ಕಷ್ಟಗಳು ಬರುತ್ತವೆ. ವೃದ್ಧಾಪ್ಯದಲ್ಲಿ ಕಷ್ಟಗಳು ಅನುಭವಿಸಲು ಕಾರಣ ಇದೇ. ಮತ್ತೆ ಯೌವನದಲ್ಲಿ ಪಾಪಗಳು ಮಾಡಿದಾಗ ಕಷ್ಟಗಳು ಏಕೆ ಬರುವುದಿಲ್ಲವೆಂದರೆ ಅವರ ಪಾಪ ಬಯಲಾಗಿಲ್ಲ ಆದ್ದರಿಂದ.

ಆದ್ದರಿಂದ ಈ ಸನ್ನಿವೇಶದಲ್ಲಿ ಅಂತರಾರ್ಥ ಏನೆಂದರೆ ಪಾಪ ಮಾಡಿದ ತಕ್ಷಣ ಕಷ್ಟ ಬರುವುದಿಲ್ಲ. ಪಾಪ ಬಯಲಾದರೇನೆ ಕಷ್ಟ ಬರುತ್ತದೆ. ಇಲ್ಲವೇ ರೋಗ ಬರುತ್ತದೆ, ಸಮಸ್ಯೆಗಳು ಬರುತ್ತವೆ, ಈ ಸನ್ನಿವೇಶದಲ್ಲಿ 100 ತಪ್ಪುಗಳು ಎಂದು ಹೇಳಲಾಗಿದೆ. ಆದರೆ ಅಲ್ಲಿ 100 ತಪ್ಪುಗಳು ಮಾಡಿದರೇನೆ ಎಂದರ್ಥವಲ್ಲ. ಅದರ ಅರ್ಥ ಪಾಪ ಬಯಲಾದರೇನೆ ಎಂದು. ಅದು ಸೃಷ್ಟಿ ಧರ್ಮ ಸೂಕ್ಷ್ಮಗಳ ಪ್ರಕಾರ ಆಧಾರವಾಗಿದೆ. ಎಷ್ಟು ತಪ್ಪುಗಳು ಮಾಡಿದರೆ ಯಾವಾಗ ಶಿಕ್ಷೆ ಬೀಳುತ್ತದೆ? ಎಷ್ಟು ಕೋಳಿ ತಿಂದರೆ ಯಾವಾಗ ರೋಗ ಬರುತ್ತದೆ. ಎನ್ನುವುದು ಸೃಷ್ಟಿ ಧರ್ಮವನ್ನು ಅನುಸರಿಸುತ್ತದೆ. ಆದರೆ ಮುಖ್ಯವಾಗಿ ತಿಳಿಯಬೇಕಾಗಿದ್ದು "ಶಿಕ್ಷೆ ಬೀಳಬೇಕೆಂದರೆ ಪಾಪದ ಕೊಡ ತುಂಬಲೇಬೇಕು'

ಪುರಾಣಗಳಲ್ಲಿ ಸಹ ಈ ವಿಷಯ ನೋಡುತ್ತಿರುತ್ತೇವೆ. ಎಂದಾದರೂ ರಾಕ್ಷಸರೊಂದಿಗೆ ಯುದ್ಧ ಮಾಡಿದಾಗ ದೇವತೆಯರು ಸೋತು ಹೋದರೆ ದೇವತೆಯರೆಲ್ಲಾ ಹೋಗಿ ವಿಷ್ಣು ಮೂರ್ತಿಗೆ ಮೊರೆಹೋಗುತ್ತಾರೆ. ಆಗ ವಿಷ್ಣು ಮೂರ್ತಿ ಸ್ವಲ್ಪ ಸಹನೆಯಿಂದಿರಿ, ಅವನ ಪಾಪ ಬಯಲಾಗಲಿ, ಆಗ ಅವನ ಗತಿ ನಾನು ತೋರಿಸುತ್ತೇನೆ ಎನ್ನುವನು.

ಹಾಗೆ ಬುದ್ಧನು ಸಹ ಹೇಳುತ್ತಾನೆ "ಪಾಪ ಬಯಲಾಗುವವರೆಗೂ ಮಾನವರಿಗೆ ಸುಖಭ್ರಾಂತಿ ಇರುವುದಿಲ್ಲ. ಸುಖಬ್ರಾಂತಿಯಿಂದ ಪಾಪಗಳು ಮಾಡುತ್ತಲೇ ಇರುತ್ತಾನೆ, ಬಿಡುವುದಿಲ್ಲ. ಆದರೆ ಆ ಪಾಪ ಬಯಲಾದ ತಕ್ಷಣ ಕಷ್ಟ ಬಂದಾಗ ತಿಳಿಯುತ್ತದೆ. ಆ ಕಷ್ಟವನ್ನು ಸರಿಸುವುದು ಎಷ್ಟು ದುರ್ಭರವೋ! ಎಷ್ಟು ನೋವೋ! ಎಷ್ಟು ನರಕವೋ! ಆದ್ದರಿಂದ ಈ ವಿಷಯ ಮೊದಲೇ ತಿಳಿದು ಪ್ರತಿಯೊಬ್ಬರು ಪಾಪಗಳು ಮಾಡಬಾರದು. ಅಂದರೆ ಹಿಂಸೆ ಮಾಡಬಾರದು. ಹಿಂಸೆಗೆ ಕಾರಣವಾದ ಮಾಂಸ ತಿನ್ನಬಾರದು.

ಮೇಲಿನವುಗಳಿಂದ **"ಪಾಪ ಮಾಡಿದರೆ ಕಷ್ಟ ಬರುವುದಿಲ್ಲ, ಪಾಪ ಬಯಲಾದರೆ ಕಷ್ಟ ಬರುತ್ತದೆ ಎಂದು ತಿಳಿಯಬೇಕು"**.

ಆದ್ದರಿಂದ ತಿಳಿಯಿರಿ ಯಾವುದೋ ಒಂದು ಕೋಳಿಯನ್ನು ಸಾಯಿಸಿದಷ್ಟು ಮಾತ್ರಕ್ಕೆ ಒಂದು ಮೇಕೆಯನ್ನು ಹಿಂಸಿಸಿದಷ್ಟಕ್ಕೆ ಒಂದು ಮೀನನ್ನು ತಿಂದಿದ್ದಕ್ಕೆ ಕಷ್ಟಗಳು ಬರುವುದಿಲ್ಲ. ಏನೂ ಆಗುವುದಿಲ್ಲ, ಅದಕ್ಕೆ ಅದು ತಪ್ಪು ಅಲ್ಲ ಎಂದು ಭಾವಿಸಬೇಡಿ. ಆ ತಪ್ಪು ಮತ್ತೆ ಮತ್ತೆ ಮಾಡಬೇಡಿ. ಜೀವನವನ್ನು ನರಕ ಮಾಡಿಕೊಳ್ಳಬೇಡಿ. **"ಪಾಪ ಮಾಡಿದರೂ ಕಷ್ಟಗಳು ಬಂದಿಲ್ಲವೆಂದರೆ ಅದು ಪಾಪ ಅಲ್ಲವೆಂದು ತಿಳಿಯಬೇಡಿ. ಪಾಪ ಬಯಲಾಗಿಲ್ಲ ಎಂದು ತಿಳಿಯಿರಿ"**.

ಇದೇ ಭಾಗವತದಲ್ಲಿರುವ ಶಿಶುಪಾಲನ ಸನ್ನಿವೇಶದ ಮೂಲಕ ಭಗವಂತನು ಲೋಕಕ್ಕೆ ನೀಡಿದ ಸಂದೇಶ.




**'ಪೂರ್ವಜನ್ಮ ಕೃತಂ ಪಾಪಂ ವ್ಯಾಧಿ ರೂಪೇಣ ಪೀಡ್ಯತೆ!'**

# ಶ್ರೀಕೃಷ್ಣನು ಕುಚೇಲನಿಗೆ ಮರ್ಯಾದೆ ಮಾಡುವುದು



ಶ್ರೀಕೃಷ್ಣನ ಬಾಲ್ಯ ಸ್ನೇಹಿತ, ಬಡವ ಆದ ಕುಚೇಲನಿಗೆ ಮರ್ಯಾದೆ ಮಾಡುವುದೇ ಅಲ್ಲ, ಕುಚೇಲನು ಕೊಟ್ಟ ಅತಿ ಸಾಮಾನ್ಯವಾದ ಆಹಾರ ಅವಲಕ್ಕಿಯನ್ನು ಇಷ್ಟದಿಂದ ಸೇವಿಸಿದನು ಶ್ರೀಕೃಷ್ಣ.

ಈ ಸನ್ನಿವೇಶದ ಸಂದೇಶ ಏನೆಂದರೆ? ಎಂತಹ ಶ್ರೇಷ್ಠರಾದರೂ ಸರಿ ಬಡವರನ್ನು, ಸಾಮಾನ್ಯರನ್ನು, ತಮ್ಮೊಂದಿಗೆ ಸಮಾನವಾಗಿ ನೋಡಬೇಕೆಂದು, ಗೌರವಿಸಬೇಕೆಂದು ತಿಳಿಯುವುದು. ಶ್ರೇಷ್ಠರು ಕೂಡ ಉನ್ನತ ಭೋಜನಕ್ಕಿಂತ ಸಾಮಾನ್ಯರು ಪ್ರೀತಿಯಿಂದ, ಅನುರಾಗದಿಂದ, ಕೊಡುವ ಯಾವುದಾದರೂ ಸರಿ ಕೊನೆಗೆ ಅವಲಕ್ಕಿ ಆದರೂ ಸರಿ, ಉನ್ನತವೆಂದು ಭಾವಿಸಬೇಕೆಂದು ಪಂಚಭಕ್ಷ್ಯ ಪರಮಾನ್ನಗಳಂತೆ ಭಾವಿಸಬೇಕೆಂದು

ಶ್ರೀಕೃಷ್ಣನು ಲೋಕಕ್ಕೆ ಈ ಸನ್ನಿವೇಶದ ಮೂಲಕ ಬೋಧಿಸಿದನು. ಅದೇ ಈ ಸನ್ನಿವೇಶದಲ್ಲಿರುವ ಅಂತರಾರ್ಥ.

ಅಂದರೆ ಸಾಮಾನ್ಯರನ್ನು ಕೀಳಾಗಿ ನೋಡುವುದು, ಅವಮಾನಿಸುವುದು, ಮಾಡಬಾರದು. ಹಣವಿದೆಯೆಂದು, ಅಧಿಕಾರವಿದೆಯೆಂದು, ಉನ್ನತವಾಗಿ ಭಾವಿಸಿ ಕಾಣುವುದು ಮಾಡಬಾರದು. ಎಲ್ಲರೂ ಒಂದೇ ಸಮಾನವೆಂದು ತಿಳಿಯಬೇಕು. ಹಾಗೇ ವರ್ತಿಸಬೇಕು. ಆದ್ದರಿಂದ ಇದೆಯೆಂದು ಅಹಂಕಾರ ಪಡಬೇಡಿ, ಇಲ್ಲ ಎಂದು ವ್ಯಥೆ ಪಡಬೇಡಿ, ಈ ಸೃಷ್ಟಿಯಲ್ಲಿ ಭಗವಂತನಿಗೆ ಎಲ್ಲ ಸಮಾನ ಎಂದು ತಿಳಿಯಿರಿ. ಅದೇ ಈ ಸನ್ನಿವೇಶದ ಸಂದೇಶ.

ಹಾಗೇ ನಾವು ಯೋಚಿಸಿದರೆ ಪ್ರತಿ ಸನ್ನಿವೇಶದ ಮೂಲಕ ಒಂದು ಸಂದೇಶ ತಿಳಿಯಬಹುದು. ಭಾಗವತದಲ್ಲಿ ಸಂದೇಶಾತ್ಮಕವಾದ ಸನ್ನಿವೇಶಗಳೇ ವ್ಯಾಸಮಹರ್ಷಿ ನಮಗೆ ಕೊಟ್ಟಿದ್ದಾರೆ. ಹಾಗಲ್ಲದೇ ಶ್ರೀಕೃಷ್ಣನ ಒಂದು ವರ್ಷದ ಜೀವನವನ್ನು ಅಣು ಅಣುವಾಗಿ ಬರೆಯಬೇಕೆಂದರೆ ಕೆಲವು ಸಾವಿರ ಗ್ರಂಥಗಳಾಗುತ್ತವೆ. ಹಾಗೇ ಬರೆಯುವುದು ಅಸಾಧ್ಯ, ಓದುವುದು ಅಸಾಧ್ಯ.

ಆದ್ದರಿಂದ ಯಾವ ಸನ್ನಿವೇಶಗಳಾದರೆ ಲೋಕಕ್ಕೆ ಅವಶ್ಯವೋ! ಲೋಕದ ಜನರಿಗೆ ಆಚರಣಿಯವೋ! ಅಂತಹವು ಮಾತ್ರ ವ್ಯಾಸ ಭಗವಾನನು ನೀಡಿದ್ದಾನೆ. ಆದ್ದರಿಂದ ಆ ಮುಖ್ಯ ಸನ್ನಿವೇಶಗಳಲ್ಲಿನ ಅಂತರಾರ್ಥ ಗ್ರಹಿಸಿ ಅವುಗಳನ್ನು ಆಚರಣೆಯಲ್ಲಿಡಬೇಕು. ನಾವು ಸಹ ಶ್ರೀಕೃಷ್ಣನಂತೆ ಲೋಕಕಲ್ಯಾಣಕ್ಕೆ ಶ್ರಮಿಸಬೇಕು. ಹಾಗೇ ಜೀವಿಸಿದರೇ ಈ ಭೂಲೋಕವೇ ಬಂದು ಸ್ವರ್ಗ ಅಲ್ಲವೇ? ಆದರೆ ಪ್ರಸ್ತುತ ಲೋಕದಲ್ಲಿ ಎಲ್ಲಾ ಕಂಸರೆ ಕಾಣಿಸುತ್ತಿದ್ದಾರೆ. ಅದಕ್ಕೆ ಲೋಕ ಹೀಗಿದೆ. ಆದ್ದರಿಂದ ಭಾಗವತದಲ್ಲಿನ ಸಂದೇಶವನ್ನು ತಿಳಿಯೋಣ. ಈ ಕಲಿಯುಗವನ್ನು ಸತ್ಯಯುಗದಂತೆ ಬದಲಿಸೋಣ.

**ಆನಂದವಾಗಿ ಬದುಕುವ ಹಕ್ಕು ನಿಮಗೇ ಅಲ್ಲ**
**ಭಗವಂತ ನಮಗೂ ಕೊಟ್ಟಿದ್ದಾನೆ.**



# ಪುರಾಣ ಕಥೆಗಳು – ಶಾಸ್ತ್ರಗಳು



ಪುರಾಣ ಕಥೆಗಳು, ಶಾಸ್ತ್ರಗಳು ಇವೆಲ್ಲಾ ಮಾನವರಿಗೆ ಮಾನವ ಲೋಕಕ್ಕೆ ಒಂದು ಸಂದೇಶವನ್ನು ಕೊಡುವುದಕ್ಕೆ ಪಂಡಿತರೊಡನೆ, ಋಷಿಗಳಿಂದ ಬರೆಯಲ್ಪಟ್ಟಿವೆ. ಇವುಗಳಲ್ಲಿ ಕೆಲವು ಸಂಭವಿಸಿರಬಹುದು. ಇನ್ನೂ ಕೆಲವು ಸಂಭವಿಸದೇ ಇರಬಹುದು.

ಆದ್ದರಿಂದ ನಾವು ಅವುಗಳಲ್ಲಿರುವ ಅಂತರಾರ್ಥವನ್ನು ತಿಳಿಯೋಣ, ಅವುಗಳ ಮೂಲಕ ಕೊಡಲ್ಪಟ್ಟಂತಹ ಸಂದೇಶವನ್ನು ಗ್ರಹಿಸಬೇಕು. ಅಷ್ಟೇ ಹೊರತು ಅದು ಆಯಿತಾ? ಇಲ್ಲವಾ? ವಾಸ್ತವವಾ? ಅಲ್ಲವೇ? ಎಂದು ಯೋಚಿಸಬಾರದು. ಅವುಗಳಲ್ಲಿರುವ ಸಂದೇಶ ತೆಗೆದುಕೋಳ್ಳದೆ ಕೆಟ್ಟರ್ಥಗಳು ಕಲ್ಪಿಸಿಕೊಂಡು ತಲೆಕೆಡಿಸಿಕೋಳ್ಳಬಾರದು. ತಿಳಿಯಿರಿ ಅವು ಎಲ್ಲಾ ಸಂದೇಶಾತ್ಮಕವಾದವು ಮಾತ್ರ, ಪಂಡಿತರು ಲೋಕಕ್ಕೆ ತಾವು ಕೊಡಬೇಕಾದ ಸಂದೇಶವನ್ನು ಈ ಪುರಾಣ ಕಥೆಗಳಿಂದ ಕೊಟ್ಟಿದ್ದಾರೆ.

ಕೆಲವು ಪುರಾಣಗಳ ಮೂಲಕ ಶಿವನು ಶ್ರೇಷ್ಠನೆಂದು, ಕೆಲವು ಪುರಾಣಗಳ ಮೂಲಕ ವಿಷ್ಣು ಶ್ರೇಷ್ಠನೆಂದು, ಆ ಪಂಡಿತರು ತಿಳಿಸಿದ್ದಾರೆ. ಎಲ್ಲಾ ಕವಿತೆಯ ಚಮತ್ಕಾರವೇ ಹೊರತು ಬೇರೇನು ಇಲ್ಲ. ಕಾರಣ ದೇವರೆಲ್ಲಾ ಒಂದೇ. ಬೇರೆ ಬೇರೆ ಅಲ್ಲ, ಎಲ್ಲಾ ನಾನೇ ಎಲ್ಲಿಯೂ ನಾನೇ ಎಂದು ವಿಶ್ವರೂಪ ತೋರಿಸಿದ ಶ್ರೀಕೃಷ್ಣನು ಹೇಳಲಿಲ್ಲವೇ? "ಬ್ರಹ್ಮವೊಂದೇ! ಪರಬ್ರಹ್ಮವೊಂದೇ" ಎಂದು ಅನ್ನಮಯ್ಯ ಹೇಳಿಲ್ಲವೇ? "ಸಬ್ ಕಾ ಮಾಲಿಕ್ ಏಕ್ ಹೈ" ಎಂದು ಶಿರಡಿ ಬಾಬಾ ಹೇಳಿಲ್ಲವೇ? "ನಾನು ನನ್ನ ತಂದೆ, ನಾನು ನೀವು ಎಲ್ಲಾ ಒಂದೇ ಎಂದು ಜೀಸಸ್ ಕ್ರೈಸ್ಟ್ ಹೇಳಿಲ್ಲವೇ? ಆದ್ದರಿಂದ ಅವುಗಳಲ್ಲಿನ ಧರ್ಮಸೂಕ್ಷ್ಮಗಳು, ಸಂದೇಶಗಳು ಮಾತ್ರ ನಾವು ಗ್ರಹಿಸಬೇಕು. ಅಷ್ಟಕ್ಕಿಂತ ಆಳವಾಗಿ ಹೋದರೆ ಎಲ್ಲಾ ಅಲ್ಲಕಲ್ಲೋಲ".

# ಶಿಬಿಚಕ್ರವರ್ತಿ



ಜೀವಿಗಳ ಮೇಲೆ ದಯೆತೋರಿಸಬೇಕೆಂದು ಶಿಬಿಚಕ್ರವರ್ತಿ ಕಥೆಯ ಮೂಲಕ ತಿಳಿಸಿದ್ದಾರೆ ಪಂಡಿತರು. ಶಿಬಿಚಕ್ರವರ್ತಿ ಒಂದು ಪಾರಿವಾಳವನ್ನು ಅಂದರೆ ಪಕ್ಷಿಗಳು ರಕ್ಷಿಸುವುದಕ್ಕಾಗಿ ತನ್ನ ಮಾಂಸವನ್ನು ಕೊಯ್ದು ಕೊಟ್ಟನು. ಅಂದರೆ ಆ ಜೀವಿಗಳನ್ನು, ಪಕ್ಷಿಗಳನ್ನು, ಮೂಕ ಜೀವಿಗಳನ್ನು ರಕ್ಷಿಸುವುದರಲ್ಲಿನ ಶ್ರೇಷ್ಠತೆಯನ್ನು ಪಂಡಿತರು ಈತರ ವಿವರಿಸಿದ್ದಾರೆ. ಅದರ ಅರ್ಥ ನಾವು ಸಹ ಪಕ್ಷಿಗಳನ್ನು ಅಂದರೆ ಕೋಳಿ, ಜೀವಿಗಳನ್ನು ರಕ್ಷಿಸಬೇಕೆಂದು, ಸಾಯಿಸಬಾರದೆಂದು, ಹಿಂಸಿಸಬಾರದೆಂದು, ಅವುಗಳ ಮಾಂಸ ತಿನ್ನಬಾರದೆಂದು, ಅವುಗಳ ಮೇಲೆ ದಯೆ ತೋರಿಸಬೇಕೆನ್ನುವುದೇ ಆ ಪುರಾಣ ಕಥೆಯ ಸಂದೇಶ ಅಷ್ಟೇ ಹೊರತು ಅವುಗಳಿಗಾಗಿ ನಿಮ್ಮ ಮಾಂಸ ಕೊಯ್ದು ಕೊಡಬೇಕಾದ ಅವಶ್ಯಕತೆಯಿಲ್ಲ. ಅವುಗಳ ಮಾಂಸ ತಿನ್ನದಿದ್ದರೆ ಸಾಕು.

ಆಲೋಚಿಸಿ ಒಂದು ಪಕ್ಷಿಯನ್ನು ರಕ್ಷಿಸಲು ಶಿಬಿಚಕ್ರವರ್ತಿ ತನ್ನ ಮಾಂಸವನ್ನು ಕೊಯ್ದು ಕೊಟ್ಟನಲ್ಲವೆ! ಆದರೆ ನಾವು ನಮ್ಮ ಮಾಂಸವನ್ನು ಹೆಚ್ಚಿಸಿಕೋಳ್ಳಲು ಎಷ್ಟು ಪಕ್ಷಿಗಳ ಮಾಂಸವನ್ನು ಭಕ್ಷಿಸುತ್ತಿದ್ದೇವೆ?

# ಭಕ್ತ ಕಣ್ಣಪ್ಪ




ಹಾಗೆ ಭಕ್ತ ಕಣ್ಣಪ್ಪನ ಕಥೆಯ ಮೂಲಕ ಭಗವಂತನ ಮೇಲೆ ಅಚಂಚಲವಾದ ಭಕ್ತಿ, ವಿಶ್ವಾಸಗಳು ಇರಬೇಕೆನ್ನುವ ಸಂದೇಶದೊಂದಿಗೆ, ಭಕ್ತಿ ಹೇಗಿರಬೇಕೋ ಸಹ ನಮಗೆ ತಿಳಿಸಿದ್ದಾರೆ ಪಂಡಿತರು.

ಭಕ್ತ ಕಣ್ಣಪ್ಪನ ಭಕ್ತಿ ಭಗವದ್ಭಕ್ತಿ, ಸಾಮಾನ್ಯರ ಭಕ್ತಿ ಆಸೆಯ ಭಕ್ತಿ, ಭಕ್ತ ಕಣ್ಣಪ್ಪ ಭಗವಂತನನ್ನು ಪಡೆಯಬೇಕೆಂಬ ಆತುರತೆ, ಆವೇದನೆಯಲ್ಲಿ, ತಪನೆಯಿಂದ ತಾನು ಮೈಮರೆತನು. ತಾನು ಏನು ಮಾಡುತ್ತಿದ್ದಾನೋ, ಏನು ಮಾತನಾಡುತ್ತಿದ್ದಾನೋ, ತಿಳಿಯದ ಸ್ಥಿತಿಯಲ್ಲಿದ್ದಾನೆ. ಒಂದೇ ಆತುರತೆ, ಒಂದೇ ಆವೇದನೆ, ಅದೇ ಭಗವಂತನನ್ನು ಪಡೆಯಬೇಕೆಂದು, ದರ್ಶಿಸಬೇಕೆಂದು.

ಆ ಭಕ್ತಿಪರವಶದಲ್ಲಿ ತಾನು ಏನು ಮಾಡುತ್ತಿದ್ದಾನೋ ತಿಳಿಯದ ಸ್ಥಿತಿಗೆ ಹೋಗಿದ್ದಾನೆ. ತಾನು ಮಾಡುವ ಕೆಲಸ ಸರಿ? ತಪ್ಪು? ಎಂಬ ಆಲೋಚನೆ ಸಹ ಇಲ್ಲ. ಆಲೋಚಿಸುವ ಸ್ಥಿತಿ ಇಲ್ಲ. ಭಕ್ತ ಕಣ್ಣಪ್ಪ ತಪನೆ, ಆವೇದನೆ, ಆತುರತೆ, ಎಲ್ಲಾ ಭಗವಂತನೆ. ಅಷ್ಟೇ ಅಲ್ಲ ಅವನಿಗೆ ಭಗವಂತನ ಬಗ್ಗೆ ಯಾವ ವಿಷಯ ತಿಳಿಯದು.

ಅಂತಹ ಅಮಾಯಕ ಕಣ್ಣಪ್ಪ. ಭಗವಂತನು ಹೇಗಿರುತ್ತಾನೆ? ಎಲ್ಲಿರುತ್ತಾನೆ? ಅವನನ್ನು ಹೇಗೆ ಸೇರಬೇಕು? ಅವನು ಕಣ್ಣಿಗೆ ಕಾಣಿಸುತ್ತಾನಾ? ಇಲ್ಲವೆ? ಅವನಿಗೆ ಆಹಾರ ಅವಶ್ಯವೆ? ಇಲ್ಲವೇ? ಅವನಿಗೆ ಹಸಿವು ಇದೆಯಾ? ಇಲ್ಲವೋ? ತಿನ್ನುತ್ತಾನೋ? ಇಲ್ಲವೋ? ಏನು ತಿನ್ನುತ್ತಾನೆ? ಎಂಬ ವಿಷಯಗಳು ತಿಳಿಯದ ಪೂರ್ತಿ ಅಮಾಯಕನ

ಸ್ಥಿತಿಯಲ್ಲಿದ್ದಾನೆ.

ಅಂತಹ ಸ್ಥಿತಿಯಲ್ಲಿ ಭಗವಂತನಿಗೆ ಮಾನವರ ಹಾಗೆ ಹಸಿವಿರುತ್ತದೆ ಎಂದು, ಅವನಿಗೆ ಹಸಿವಾಗುತ್ತದೆನೋ, ಎಂದು ಭಾವಿಸಿ ಲಿಂಗಕ್ಕೆ ಮಾಂಸ ನಿವೇಧಿಸಿದನು. ಅದರ ಅರ್ಥ ಕಣ್ಣಪ್ಪ ಅಂತಹ ಭಕ್ತಪರವಶದಲ್ಲಿದ್ದನೆಂದು ಹೇಳುವುದೇ ಹೊರತು ನೀವು ಮಾಂಸ ತಿನ್ನಬಹುದಾ, ತಿನ್ನಿ ಎಂದು ಹೇಳುವುದಕ್ಕಲ್ಲ. ತಿನ್ನಿ ಎಂದಂತೆ ಅಲ್ಲ, ಕಣ್ಣಪ್ಪನೊಂದಿಗೆ ಹೋಲಿಕೆ ಮಾಡಲು ಇವರು ಹೇಗೆ ಸರಿ ಹೋಗುತ್ತಾರೆ? ಕಣ್ಣಪ್ಪ ಇವರು ಒಂದೇನಾ?

ಅಂತಹ ಸಮಯದಲ್ಲಿ ಅವನ ಭಕ್ತಿಯನ್ನು ಇನ್ನೂ ಪರೀಕ್ಷಿಸಲು ಭಗವಂತನು ಕಣ್ಣಿನಲ್ಲಿ ನೀರು ಸುರಿಸಿದನು. ಆಗ ಕಣ್ಣಪ್ಪ ತನ್ನ ಎರಡೂ ಕಣ್ಣನ್ನು ಕಿತ್ತಿಕೊಟ್ಟನು. ನೀವು ಹಾಗೆ ಕೊಡಬಲ್ಲಿರಾ? ಕನಿಷ್ಠ ನಿಮ್ಮ ಕೈ ಕೊಡಬಲ್ಲಿರಾ? ಕೊನೆಗೆ ಬೆರಳಾದರೂ ಕೊಡಬಲ್ಲಿರಾ? ಅಂದರೆ ಭಗವಂತನಿಗಾಗಿ ಆ ಕೆಲಸ ಮಾಡಲಾರದವರು, ಕಣ್ಣಪ್ಪ ಮಾಂಸ ಇಟ್ಟಿದ್ದನೆಂದು ನಾವು ಮಾಂಸ ತಿನ್ನುತ್ತೇವೆ. ಎಂದರೆ ಏನು ಹೇಳಬೇಕು? ಇವರು ಎಂತಹ ಭಕ್ತರು? ಆಲೋಚಿಸಿರಿ. ಆದ್ದರಿಂದ ಈ ಪುರಾಣ ಕಥೆಗಳಲ್ಲಿರುವ ಸಂದೇಶ ಏನೆಂದು ಯೋಚಿಸಬೇಕೆ ಹೊರತು ಮತ್ತೊಂದು ತರಹ ಯೋಚಿಸಿದರೆ ನಷ್ಟಪಡುವುದು ನಾವೇ.

ಇದರರ್ಥ ಭಗವಂತನನ್ನು ದರ್ಶಿಸಿಕೊಳ್ಳಬೇಕೆಂದವರು ಎಲ್ಲದರ ಮೇಲೂ ಮಮಕಾರ ಬಿಡಬೇಕು. ನಾನು ಎನ್ನುವ ಭಾವನೆ ಸಹ ಬಿಡಬೇಕು. ಅಂತಹ ಸ್ಥಿತಿಯಲ್ಲಿ ಇಡಲ್ಪಟ್ಟ ಪರೀಕ್ಷೆಗಳು ಸಹ ಕಠಿಣವಾಗಿರುತ್ತವೆ. ಅವುಗಳನ್ನು ಸಹ ಮೀರಿಸಬೇಕು. ಆಗ ಭಗವತ್‌ಸಾಕ್ಷಾತ್ಕಾರ ಲಭಿಸುತ್ತದೆ ಎನ್ನುವುದೇ ಈ ಕಥೆಯಲ್ಲಿರುವ ಸಂದೇಶ.

ಅಷ್ಟೇ ಹೊರತು ನನಗೆ ಕಣ್ಣಿಲ್ಲ, ಕಣ್ಣುಕೊಡು, ನಡಿಗೆ ಇಲ್ಲ, ಕಾಲು ಕೊಡು, ಕೈಗಳು ಸರಿಯಿಲ್ಲ, ಕೈಗಳು ಕೊಡು ಎಂದು ಬೇಡುವವರು ಅವುಗಳಿಗಾಗಿ ಆರಾಧಿಸುವವರು ಭಕ್ತರು ಹೇಗೆ ಆಗುತ್ತಾರೆ?

ಭಗವಂತನಿಗಾಗಿ ಕಣ್ಣು ಕೊಡುವವರು, ಕಣ್ಣು ಹೋದರೂ ಯೋಚಿಸದವನು ಅವನೇ ಭಗವಂತನಿಗಾಗಿ ಆತುರ ಪಡುವವನು. ಅವನೇ ನಿಜವಾದ ಭಕ್ತನು. ಅವನೇ ಮುಕ್ತಿ ಪಡೆಯುತ್ತಾನೆ. ಭಗವಂತನ ಅನುಗ್ರಹ ಪಡೆಯುತ್ತಾನೆ.

# ಯಮಲೋಕ



ಯಮಲೋಕದಲ್ಲಿ ಯಮಧರ್ಮ ರಾಜನು ಸಿಂಹಾಸನದ ಮೇಲೆ ಆಸೀನನಾಗಿರುತ್ತಾನೆ. ಅವನ ಪಕ್ಕಕ್ಕೆ ಚಿತ್ರಗುಪ್ತನಿರುತ್ತಾನೆ. ಚಿತ್ರಗುಪ್ತನ ಎದುರಿಗೆ ಒಂದು ದೊಡ್ಡ ಪುಸ್ತಕ ಇರುತ್ತದೆ. ಆ ಪುಸ್ತಕದಲ್ಲಿ ಮಾನವರ ಪಾಪ, ಪುಣ್ಯಗಳಲ್ಲಿ ಬರೆಯಲ್ಪಟ್ಟಿರುತ್ತದೆ. ಹಾಗೆಯೇ ಯಮಲೋಕದಲ್ಲಿ ಯಮಭಟರು ಸಹ ಇರುತ್ತರೆ. ಅವರು ಸತ್ತು ಹೋದವರನ್ನು ಅಂದರೆ ಆಯುಷ್ಯ ಮುಗಿದವರನ್ನು ಯಮಲೋಕಕ್ಕೆ ಕರೆದುಕೊಂಡು ಬರುತ್ತಾರೆ. ಪಾಪ ಮಾಡಿದವರಿಗೆ ಯಮಲೋಕದಲ್ಲಿ ಶಿಕ್ಷೆಗಳು ಕೊಡುತ್ತಾರೆ. ಹಾಗೇ ಪಾಪಾತ್ಮರು ಶಿಕ್ಷೆಗಳನ್ನು ಅನುಭವಿಸುತ್ತಿರುತ್ತಾರೆ. ಪುರಾಣಗಳ ಮೂಲಕ ಪಂಡಿತರು ಲೋಕಕ್ಕೆ ನೀಡಿದ ಯಮಲೋಕದ ಸಾರಾಂಶವಿದೇ! ಯಮಲೋಕವೆಂದರೆ ಎಲ್ಲರಿಗೂ ಇರುವ ಕಲ್ಪನೆ ಇದೇ!

ಆದರೆ ನಾವು ಯೋಚಿಸಬೇಕಾಗಿದ್ದು ಯಮಲೋಕ ಇದೆಯಾ? ಇಲ್ಲವೆ? ಎಂದು ಅಲ್ಲ, ಯಮನು ಇದಾನೆಯೇ? ಇಲ್ಲವೇ? ಎಂದಲ್ಲ. ಈ ಪುರಾಣದ ಮೂಲಕ

ನಾವು

ತಿಳಿಯಬೇಕಾದ ಸಂದೇಶ ಏನು? ಎನ್ನುವುದು ಮುಖ್ಯ. ಅಷ್ಟೇ ಅಲ್ಲ ಈ ಪುರಾಣದ ಮೂಲಕ ಆ ಪಂಡಿತರು ಲೋಕಕ್ಕೆ ಯಾವ ಸಂದೇಶ ನೀಡಿದ್ದಾರೆ? ಆ ಸಂದೇಶ ಏನು? ಎನ್ನುವುದೇ ನಾವು ತಿಳಿಯಬೇಕು? ಅದನ್ನು ಆಚರಣೆಯಲ್ಲಿಡಬೇಕು. ಆಗಲೇ ನಮ್ಮ ಜೀವನ ಸಂತೋಷಮಯವಾಗುತ್ತದೆ. ಆದ್ದರಿಂದ ಈ ಪುರಾಣದಲ್ಲಿರುವ ಅಂತರಾರ್ಥ ಸಂದೇಶ ತಿಳಿಯೋಣ!

ನೋಡಿ ಯಾರಾದರೂ ಸತ್ತು ಹೋದ ನಂತರ ಮೊದಲು ಇಬ್ಬರು ಯಮಭಟರು ಬರುತ್ತಾರೆ. ಅವರು ಸತ್ತು ಹೋದವರನ್ನು ಹಿಡಿದುಕೊಂಡು ಯಮಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಅವರನ್ನು ಯಮನ ಮುಂದೆ ನಿಲ್ಲಿಸುತ್ತಾರೆ. ಆಗ ಯಮಧರ್ಮರಾಜನ ಪಕ್ಕದಲ್ಲಿದ್ದ ಚಿತ್ರಗುಪ್ತನು ಇವನು ಮಾಡಿದ ಪಾಪಗಳನ್ನು ಅವನ ಮುಂದಿರುವ ದೊಡ್ಡ ಪುಸ್ತಕ ತೆರೆದು ಅದರಲ್ಲಿನ ಪುಟ ತಿರುವುತ್ತಾನೆ. ಒಂದು ಪುಟ ತೆಗೆಯುತ್ತಾನೆ. ಆ ಪುಟದಲ್ಲಿ ಸತ್ತವನ ಖಾತೆಯಿರುತ್ತದೆ. ಆ ಖಾತೆ ನೋಡಿ ಅವರು ಮಾಡಿದ ಪಾಪಗಳನ್ನೆಲ್ಲಾ ಓದುತ್ತಾನೆ. ಅದನ್ನು ಕೇಳಿ ಯಮಧರ್ಮರಾಜ ಅದಕ್ಕೆ ತಕ್ಕ ಶಿಕ್ಷೆ ಕೊಡುತ್ತಾನೆ. ಯಮಭಟರು ಅವರಿಗೆ ಆ ಶಿಕ್ಷೆ ಕೊಡುತ್ತಾರೆ. ಇದೇ ಯಮಲೋಕದಲ್ಲಿ ಆಗುವ ಕಾರ್ಯಕ್ರಮ. ಆದರೆ ಇಲ್ಲಿ ಪ್ರತಿ ವಿಷಯದಲ್ಲಿಯೂ ಸಂದೇಶವಿದೆ. ಅದೇನೆಂದು ತಿಳಿಯೋಣ.

**"ಸತ್ತು ಹೋದವರನ್ನು ಕರೆದುಕೊಂಡು ಹೋಗಲು ಇಬ್ಬರು ಯಮಭಟರು ಬರುತ್ತಾರೆ"**
ಸಹಜವಾಗಿ ಲೋಕದಲ್ಲಿ ಯಾರಾದರೂ ಏನೆಂದುಕೊಳ್ಳುವರೆಂದರೆ ಸತ್ತು ಹೋದ ನಂತರ ಇನ್ನು ಜೀವನವಿಲ್ಲವೆಂದು ತಿಳಿಯುತ್ತಾರೆ. ಆದರೆ ಸತ್ತು ಹೋದ ನಂತರ ಸಹ ನಾವಿರುತ್ತೇವೆ. ನಮಗೆ ಇನ್ನು ಜೀವನವಿದೆ ಎನ್ನುವುದೇ ಈ ಸನ್ನಿವೇಶದ ಮೂಲಕ ನಮಗೆ ಕೊಡಲ್ಪಟ್ಟ ಸಂದೇಶ.

ಮತ್ತೆ ಸತ್ತು ಹೋಗಿದು ಯಾರು? ಅಂದರೇ ಶರೀರ. ಅಂದರೆ ಶರೀರ ಸುಟ್ಟು ಹೋಗಿದೆ. ಅವನು ಸತ್ತು ಮೇಲೆ ಹೋಗಿದ್ದಾನೆ ಅದಕ್ಕೆ "ಸತ್ತು ಹೋದನು" ಎನ್ನುತ್ತಾರೆ. ಸತ್ತು ಹೋದನೆಂದರೆ ಮೇಲೆ ಹೋಗಿದ್ದಾನೆ ಎಂದು ಅರ್ಥ. ಅಷ್ಟೇ ಹೊರೆತು ಏನು ಇಲ್ಲ ಎಂದು ಅಲ್ಲ.

ಇದರಿಂದ ನಮಗೆ ಸಾವಿಲ್ಲ ನಮಗಿನ್ನು ಜನ್ಮಗಳಿವೆ ಎಂದು ತಿಳಿಯಬೇಕು. ಮತ್ತೆ ನಮಗೆ ಇನ್ನೂ ಜೀವನವಿರುವಾಗ ಆ ಜೀವನದ ಬಗ್ಗೆ ಸಹ ಯೋಚಿಸಬೇಕಲ್ಲವೆ? ಆ ಜೀವನ ಸಹ ಚೆನ್ನಾಗಿರಬೇಕು ಅಲ್ಲವೆ? ಆ ಜೀವನ ಚೆನ್ನಾಗಿರಲು ಏನು ಮಾಡಬೇಕೋ ಯೋಚಿಸಬೇಕಲ್ಲವೇ? ಮತ್ತೆ ಇವುಗಳೆಲ್ಲದರ ಬಗ್ಗೆ ಯೋಚಿಸುತ್ತಿದ್ದೇವೆಯೇ? ಇಲ್ಲ. ಏಕೆಂದರೆ ಈ ವಿಷಯ ತಿಳಿಯದೇ ಇರುವುದರಿಂದ ಅದಕ್ಕೆ ಪಂಡಿತರು ಪುರಾಣದ ಮೂಲಕ ನಮಗೆ ಇನ್ನೂ ಜೀವನವಿದೆ ಎಂಬ ಸಂದೇಶ ಕೊಟ್ಟರು. ಅಷ್ಟೇ ಅಲ್ಲ, ಈ ಸೃಷ್ಟಿಯಲ್ಲಿ ನಮಗೆ ಕಾಣಿಸುವ ಭೂಲೋಕವೇ ಅಲ್ಲ, ಕಾಣಿಸದ ಲೋಕಗಳು ಅನೇಕ ಇವೆ ಎಂದು ಹೇಳುವುದೇ ಈ ಸನ್ನಿವೇಶಗಳಲ್ಲಿರುವ ಮತ್ತೊಂದು ಸಂದೇಶ. ಇದರಿಂದ ನಾವು ಈ ಶರೀರದಿಂದ ಕೆಲಕಾಲ... ಕಾಣಿಸುವ ಈ ಲೋಕದಲ್ಲಿರುತ್ತೇವೆ, ಆ ಶರೀರ ಬಿಟ್ಟ ತಕ್ಷಣ ಕಾಣಿಸದ ರೂಪದಿಂದ ಕಾಣಿಸದ ಲೋಕಗಳಿಗೆ ಹೋಗುತ್ತೇವೆಂದು ಸಹ

ತಿಳಿಯಬಹುದು. ಅಷ್ಟೇ ಅಲ್ಲ ಭೂಮಿ ಮೇಲೆ ನಾವು ಮಾಡಿದ ಕರ್ಮಗಳನುಸಾರ ಯಾವ ಲೋಕಕ್ಕೆ ಸೇರಬೇಕೋ ಆ ಲೋಕಕ್ಕೆ ಅದೃಷ್ಯ ರೂಪವಾದ ಮಾಸ್ಟರ್ಸ್ ಇಬ್ಬರು ಬಂದು ನಮ್ಮನ್ನು ಕರೆದುಕೊಂದು ಹೋಗುತ್ತಾರೆಂದು ಹೇಳಲು ಯಮಭಟರು ಬರುತ್ತಾರೆಂದು ಹೇಳುವುದರಲ್ಲಿರುವ ಅಂತರಾರ್ಥ. ಅಂದರೆ ಈ ಸನ್ನಿವೇಶದಲ್ಲಿ ಎಷ್ಟು ಅರ್ಥ ಇದೆಯೋ ನಾವು ತಿಳಿಯಬಹುದು. ಈ ಸನ್ನಿವೇಶದ ಮೂಲಕ ಆ ಪಂಡಿತರು ಎಷ್ಟು ಸಂದೇಶ ನೀಡಿದ್ದಾರೋ ಸಹ ತಿಳಿಯಬಹುದು.

ಹಾಗೇ **"ಯಮಭಟರು ಸತ್ತು ಹೋದವರನ್ನು ಯಮಲೋಕಕ್ಕೆ ಕರೆದುಕೊಂಡು ಹೋಗಿ ಯಮನ ಮುಂದೆ ನಿಲ್ಲಿಸುತ್ತಾರೆ. ಆಗ ಯಮನು ಚಿತ್ರಗುಪ್ತನಿಗೆ ಇವನು ಮಾಡಿದ ಪಾಪಗಳೇನು? ಎಂದು ಕೇಳುತ್ತಾನೆ. ಆಗ ಚಿತ್ರಗುಪ್ತನು ತನ್ನ ಹತ್ತಿರ ಇರುವ ದೊಡ್ಡ ಪುಸ್ತಕ ತೆಗೆದು ತಿರಿವಿ ಅವನ ಖಾತೆ ತೆಗೆಯುತ್ತಾನೆ"**

ಇದರಿಂದ ಪಾಪಗಳು ಮಾಡಿದವರು ಯಾರೇ ಆದರೂ! ಎಂತಹವರೇ ಆದರೂ ಸರಿ, ನಂತರ ಲೆಕ್ಕ ಹೇಳಬೇಕಾಗಿ ಬರುತ್ತದೆಂದು ತಿಳಿಯಬೇಕು. ಆದ್ದರಿಂದ ನಾವು ಮಾಡುವ ಕೆಲಸಗಳು ಕೇಳುವವರಿಲ್ಲ ಎಂದು ತಿಳಿಯಬೇಡಿ. ಖಂಡಿತವಾಗಿ ನಾವು ಮಾಡುವ ಪ್ರತಿ ಕೆಲಸಕ್ಕೆ ನಾಮ ಉತ್ತರ ನೀಡಬೇಕಾಗುತ್ತದೆ. ಆದ್ದರಿಂದ ಮಾಡುವ ಪ್ರತಿ ಕೆಲಸ ಆಲೋಚಿಸಿ ಮಾಡಿಕೋಳ್ಳುವುದೇ ಇದರಲ್ಲಿರುವ ಅಂತರಾರ್ಥ.

ಅಷ್ಟೇ ಅಲ್ಲ ಭೂಮಿ ಮೇಲೆ ಎಂತಹ ಶ್ರೇಷ್ಠರಾದರೂ ತಪ್ಪು ಮಾಡಿದರೇ ಈ ಸೃಷ್ಟಿಯಲ್ಲಿ ಒಂದೇ ನ್ಯಾಯಸ್ಥಾನದಲ್ಲಿ ಸಮಾನವಾಗಿ ದೂಷಿಗಳಂತೆ ನಿಲ್ಲಬೇಕಾಗಿ ಬರುತ್ತದೆ. ನಾವು ಮಾಡಿದ ತಪ್ಪುಗಳಿಗೆ, ಪಾಪಗಳಿಗೆ, ಉತ್ತರ ಹೇಳಬೇಕಾಗಿ ಬರುತ್ತದೆ ಎನ್ನುವುದೇ ಈ ಸನ್ನಿವೇಶದಲ್ಲಿರುವ ಮತ್ತೊಂದು ಸಂದೇಶ.

ಚಿತ್ರಗುಪ್ತನ ಹತ್ತಿರ ಪುಸ್ತಕ ಇದೆಯೆಂದರೆ ಅರ್ಥ ಈ ಸೃಷ್ಟಿಯಲ್ಲಿ ಯಾರು ಏನೇ ಮಾಡಿದರೂ? ಎಂತಹ ಕರ್ಮಗಳು ಮಾಡಿದರೂ, ಎಲ್ಲಾ ರೆಕಾರ್ಡ್ ಮಾಡಲಾಗುತ್ತದೆಂದು ತಿಳಿಯಬೇಕು. ಸಾಧಾರಣವಾಗಿ ನಮ್ಮ ತಪ್ಪುಗಳು, ಪಾಪಗಳು ಮಾಡುತ್ತಾ ಅವು ಯಾರು ನೋಡುತ್ತಿಲ್ಲವೆಂದು ಭಾವಿಸುತ್ತೇವೆ. ಯಾರಿಗೆ ಗೋತ್ತಿಲ್ಲ ಎಂದು ತಿಳಿಯುತ್ತೇವೆ. ಆದರೆ ಇಲ್ಲಿ ಯಾರು ನೋಡದಿದ್ದರೂ ಈ ಸೃಷ್ಟಿಯಲ್ಲಿ ನಾವು ಮಾಡುವ ಪ್ರತಿ ಕೆಲಸ ಪ್ರತೀಕ್ಷಣ ರೆಕಾರ್ಡ್ ಮಾಡಲಾಗುತ್ತದೆಂದು, ಆ ಕೆಲಸವನ್ನು ಎಂತಹ ರಹಸ್ಯ ಪ್ರದೇಶದಲ್ಲಿ ಮಾಡಿದರೂ, ಕೋಣೆ, ಕತ್ತಲು, ಗುಹೆಯಲ್ಲಿ ಮಾಡಿದರೂ! ಎಲ್ಲಾ ರೆಕಾರ್ಡ್ ಮಾಡಲಾಗುತ್ತದೆಂದು ತಿಳಿಸುವುದೇ ಚಿತ್ರಗುಪ್ತನ ಪುಸ್ತಕ. ಅಂದರೆ ಈ ಸೃಷ್ಟಿಯಲ್ಲಿ ಪ್ರತಿಯೊಬ್ಬರಿಗೂ ಒಂದು ಖಾತೆ ಇರುತ್ತದೆ. ನಮ್ಮ ಕರ್ಮಗಳು ರೆಕಾರ್ಡ್ ಮಾಡಲ್ಪಡುತ್ತವೆಂದು ಆ ಪಂಡಿತರು ಈ ಸನ್ನಿವೇಶದ ಮೂಲಕ ನಮಗೆ ಸಂದೇಶ ನೀಡಿದ್ದಾರೆ. ಆಧ್ಯಾತ್ಮಿಕ ಪರಿಭಾಷೆಯಲ್ಲಿ ಚಿತ್ರಗುಪ್ತನ ಪುಸ್ತಕ (ಚೀಟಿ)ವನ್ನು "ಆಕಾಶಿಕ್ ರಿಕಾರ್ಡ್ಸ್" ಎನ್ನುತ್ತಾರೆ.

ನಂತರ **"ಚಿತ್ರಗುಪ್ತನು ಅವನು ಮಾಡಿದ ತಪ್ಪು ಒಂದೊಂದು ಓದುತ್ತಾನೆ".**

ಅಂದರೆ ಅವನ ಜೀವನದಲ್ಲಿ ಎಷ್ಟು ಕೋಳಿ ತಿಂದಿದ್ದಾನೋ! ಎಷ್ಟು ಮೇಕೆ ಸಾಯಿಸಿದ್ದಾನೋ! ಎಷ್ಟು ಮೀನುಗಳನ್ನು ಎಣ್ಣೆಯಲ್ಲಿ ಬೆಯಿಸಿದ್ದಾನೋ! ಹೇಳುತ್ತಾನೆ.

ಇನ್ನು ಅವನು ಎಷ್ಟು ಜನರನ್ನು ಮೋಸ ಮಾಡಿದನು. ಎಷ್ಟು ಜನರ ಮೇಲೆ ದೌರ್ಜನ್ಯ ಮಾಡಿದನು, ಅವಮಾನ ಮಾಡಿದ್ದಾನೆ. ನಷ್ಟಪಡಿಸಿದ್ದಾನೆ, ಕಷ್ಟಗಳಿಗೆ ಗುರಿ ಪಡಿಸಿದ್ದಾನೆ, ಎನ್ನುವುದು ಸಹ ಓದುತ್ತಾನೆ. ಅಷ್ಟೇ ಅಲ್ಲ ಯಾರು ಯಾರ ಕಾಲು ತೆಗೆದರೂ, ಕೈ ಕಡಿದರೂ, ಯಾಸಿಡ್ ಹಾಕಿದರೂ, ಹೆಂಡತಿಯನ್ನು ಶಾರೀರಿಕವಾಗಿ ಹಿಂಸಿಸಿದರೂ, ಅಂದರೆ ಯಾರು ಏನು ಮಾಡಿದರೇ ಅದು ಎಷ್ಟು ಮಾಡಿದರೆ ಅಷ್ಟು ಓದುತ್ತಾನೆ. ಅಂದರೆ ನಾವು ಮಾಡಿದ ಪ್ರತಿ ಕೆಲಸ, ಪ್ರತಿ ತಪ್ಪು, ಪ್ರತಿಪಾಪದ ಬಗ್ಗೆ ರಿಕಾರ್ಡ್ ಮಾಡಲ್ಪಡುತ್ತದೆಂದು ತಿಳಿಯಬೇಕು. ಯಾರು ನೋಡುತ್ತಿಲ್ಲವೆಂದು ತಿಳಿಯಬಾರದೆಂದೇ ಇದರಲ್ಲಿರುವ ಸಂದೇಶ.

ಮತ್ತೆ ಯಾವಾಗ ಅನುಭವಿಸುತ್ತಾರೆ? ಎಲ್ಲಿ ಅನುಭವಿಸುತ್ತಾರೆ? ಹೇಗೆ ಅನುಭವಿಸುತ್ತಾರೆ? ಅಂದರೆ ಪಾಪದ ಕೊಡ ತುಂಬಿ ಬಯಲಾದಾಗ ಭೂಮಿ ಮೇಲೆ ಕಷ್ಟಗಳ ರೂಪದಲ್ಲಿ, ರೋಗಿಗಳ ರೂಪದಲ್ಲಿ, ಆಕ್ಸಿಡೆಂಟ್ ರೂಪದಲ್ಲಿ, ಖಂಡಿತವಾಗಿ ಅನುಭವಿಸುತ್ತಾರೆ. ಅನುಭವಿಸುತ್ತಾರೆ ಅಲ್ಲ, ಅನುಭವಿಸುತ್ತಿದ್ದಾರೆ ಸಹ.

ಆಗ **"ಯಮಧರ್ಮರಾಜ ಅವರು ಮಾಡಿದ ಪಾಪಗಳಿಗೆ ತಕ್ಕ ಶಿಕ್ಷೆ ಕೊಡುತ್ತಾನೆ". ಅಂದರೆ ಕೋಳಿ ಕಾಲು ಕಡಿದರೆ, ಇವನ ಕಾಲು ಕಡಿ, ಮೀನುಗಳನ್ನು ಎಣ್ಣೆಯಲ್ಲಿ ಬೇಯಿಸಿದ್ದಾನೆಂದರೆ ಇವನನ್ನು ಸಹ ಎಣ್ಣೆಯಲ್ಲಿ ಬೇಯಿಸು,ಇವನು ಹೆಂಡತಿಯನ್ನು ಹೊಡೆದನೆಂದರೆ ಇವನನ್ನು ಸಹ ಹೊಡಿ, ಎಂದು ಯಮಭಟರಿಗೆ ಯಮಧರ್ಮರಾಜನು ತಿಳಿಸುತ್ತಾನೆ. ಆಗ ಯಮಕಿಂಕರರು ಶಿಕ್ಷೆಯನ್ನು ಜಾರಿಗೋಳಿಸುತ್ತಾರೆ".**

ಈ ಸನ್ನಿವೇಶದ ಅರ್ಥವೇನೆಂದರೆ ಅಲ್ಲಿ ಯಮನು ಶಿಕ್ಷೆಗಳನ್ನು ಹಾಕುತ್ತಾನೆ ಯಮಭಟರು ಜಾರಿಮಾಡುತ್ತಾರೆಂದು ಅರ್ಥ ಅಲ್ಲ, ಈ ಸೃಷ್ಟಿಯಲ್ಲಿ ಯಾರಾದರೂ ಸರಿ ಮಾಡಿದ ಪಾಪಗಳಿಗೆ ಶಿಕ್ಷೆ ಅನುಭವಿಸಬೇಕು. ಅಂದರೆ ಕಷ್ಟಗಳ ಪಾಲಾಗಬೇಕೆಂದು



ಹೇಳುವುದೇ ಈ ಸನ್ನಿವೇಶದ ಸಂದೇಶ. ಅಷ್ಟೇ ಅಲ್ಲ, ಎಂತಹ ಪಾಪಗಳು ಮಾಡಿದರೆ ಅಂತಹ ಶಿಕ್ಷೆ ಅನುಭವಿಸಬೇಕಾಗಿ ಬರುತ್ತದೆ. ಎಷ್ಟು ಮಾಡಿದರೆ ಅಷ್ಟು ಶಿಕ್ಷೆ ಅನುಭವಿಸಬೇಕೆಂದು ತಿಳಿಯಪಡಿಸುವುದೇ ಈ ಸನ್ನಿವೇಶದ ಸಂದೇಶ.

ಅಷ್ಟೇ ಹೊರತು ನಾವು ಮಾಡಿದ ಪಾಪಗಳಿಗೆ ಶಿಕ್ಷೆಗಳು ಮೇಲೆ ಅನುಭವಿಸುವುದಿಲ್ಲ, ಕಷ್ಟಗಳ ರೂಪದಲ್ಲಿ ಇಲ್ಲೇ ಅನುಭವಿಸುತ್ತೇವೆ. ಏಕೆಂದರೆ ದೇಹದಿಂದ ಮಾಡಿದ ಪಾಪಗಳಿಗೆ ದೇಹಕ್ಕೆ ಶಿಕ್ಷೆ ಕೊಡುತ್ತಾರೆ ಹೊರತು ದೇಹ ಬಿಟ್ಟು ಆತ್ಮವನ್ನು ಯಾರು ಶಿಕ್ಷಿಸುತ್ತಾರೆ? ಆತ್ಮನನ್ನು ಯಾರು ಏನು ಮಾಡಲು ಆಗುವುದಿಲ್ಲ ಎಂದು ತಾನೇ ಶ್ರೀಕೃಷ್ಣ ಭಗವಾನನು ಹೇಳಿದ್ದು. "ಆತ್ಮವನ್ನು ಅಗ್ನಿ ದಹಿಸುವುದಿಲ್ಲ, ನೀರು ತೋರಿಸುವುದಿಲ್ಲ, ಶಸ್ತ್ರ ಬೇಧಿಸುವುದಿಲ್ಲ, ಗಾಳಿ ನಂದಿಸುವುದಿಲ್ಲ" ಎಂದು ಹೇಳಿಲ್ಲವೆ?

ಆದ್ದರಿಂದ ಆತ್ಮವನ್ನು ಯಾರೂ ಏನೂ ಮಾಡುವುದಿಲ್ಲ, ದೇಹದಿಂದ ಮಾಡಿದ ಪಾಪಗಳಿಗೆ ಶಿಕ್ಷೆಗಳು ದೇಹದಿಂದ ಅನುಭವಿಸಬೇಕು. ಆದ್ದರಿಂದ ನಾವು ಎಂತಹ ಹಿಂಸೆ ಮಾಡಿದರೆ ಅಂತಹ ಹಿಂಸೆ ಅನುಭವಿಸುತ್ತೇವೆಂದು, ಎಂತಹ ಪಾಪಗಳು ಮಾಡಿದರೆ ಅಂತಹ ನರಕ ಅನುಭವಿಸುತ್ತೇವೆಂದು, ಎಂತಹ ತಪ್ಪುಗಳು ಮಾಡಿದರೆ ಅಂತಹ ಶಿಕ್ಷೆಗಳು ಭೂಮಿ ಮೇಲೆ ದೇಹದಿಂದ ಅನುಭವಿಸುತ್ತೇವೆಂದು ಆ ಪಂಡಿತರು ಯಮಲೋಕ ಸನ್ನಿವೇಶದ ಮೂಲಕ ನಮಗೆ ಸಂದೇಶ ನೀಡಿದರು. ಜೀವಹಿಂಸೆ ಮಾಡಬಾರದು. ಮಾಂಸ ತಿನ್ನಬಾರದೆಂದು ತಿಳಿಯಬೇಕು.  ಅಷ್ಟೇ ಹೊರತು ಯಮಲೋಕ ಇದೆಯಾ? ಇಲ್ಲವೇ? ಯಮನು ಇದಾನಾ? ಇಲ್ಲವೇ? ಎನ್ನುವುದು ಮುಖ್ಯ ಅಲ್ಲ. ಈ ಪುರಾಣದಿಂದ ಆ ಪಂಡಿತರು ಲೋಕಕ್ಕೆ ಏನು ಸಂದೇಶ ನೀಡಿದ್ದಾರೆ ಎನ್ನುವುದೇ ಮುಖ್ಯ. ಆದ್ದರಿಂದ ಪುರಾಣಗಳನ್ನು ಸಂದೇಶಾತ್ಮಕವಾಗಿ ನೋಡಿದರೆ ನಾವೆಷ್ಟೋ ಲಾಭ ಪಡೆಯುತ್ತೇವೆ. ಆದರೆ ವಿಮರ್ಶಾತ್ಮಕವಾಗಿ ನೋಡಿದರೇ ಎಲ್ಲಾ ಅಲ್ಲೋಲಕಲ್ಲೋಲ ಎಲ್ಲಾ ನಷ್ಟ.



# ಭಕ್ತ ಮಾರ್ಕಂಡೇಯ



ಭಕ್ತ ಮಾರ್ಕಂಡೇಯನು ಶಿವಭಕ್ತನು. ಸ್ವಲ್ಪ ಆಯುಷ್ಯನಿಂದ ಜನ್ಮಿಸಿದವನು. ತಾನು ಇನ್ನೂ ಜೀವಿಸಬೇಕೆಂಬ ಉದ್ದೇಶದಿಂದ ಶಿವನನ್ನು ಆಶ್ರಯಿಸಿದ್ದಾನೆ. ಅಂದರೆ ನಮ್ಮ ಲೆಕ್ಕದ ಪ್ರಕಾರ ಶಿವಲಿಂಗವೇ ಶಿವನಾಗಿದ್ದರಿಂದ ಶಿವಲಿಂಗವನ್ನು ಆಶ್ರಯಿಸಿದನು ಎಂದು ಹೇಳುತ್ತೇವೆ. ಮಾರ್ಕಂಡೇಯನಿಗೆ ಆಯುಷ್ಯ ಮುಗಿದಿದೆ. ಮರಣದ ಸಮಯ

ಹತ್ತಿರವಾಗಿದೆ. ಯಥಾ ಪ್ರಕಾರ ಯಮನು ಮಾರ್ಕಂಡೇಯನ ಪ್ರಾಣ ಅಂದರೆ ಆತ್ಮವನ್ನು ತೆಗೆದುಕೊಂಡು ಹೋಗಲು ಬರುತ್ತಾನೆ.

ಆದರೆ ಮಾರ್ಕಡೇಯನು ಶಿವಲಿಂಗವನ್ನು ಹಿಡಿದುಕೊಂಡು ಬಿಟ್ಟಿಲ್ಲ ಅಂದರೆ ಶಿವನನ್ನು ಗಟ್ಟಿಯಾಗಿ ಹಿಡಿದುಕೊಂಡನು ಎಂದರೆ ಆಶ್ರಯಿಸಿದನೆಂದು ನಾವು ಹೇಳುತ್ತೇವೆ. ಆದರೂ ಸರಿ ಯಮಧರ್ಮರಾಜ ಮಾರ್ಕಡೇಯನನ್ನು ಕರೆದುಕೊಂಡು ಹೋಗಲು ಪ್ರಯತ್ನಿಸಿದಾಗ ಶಿವನು ಪ್ರತ್ಯಕ್ಷವಾಗಿ ಯಮನನ್ನು ಶಿಕ್ಷಿಸಿದನು. ನನ್ನನ್ನು ಆಶ್ರಯಿಸಿದ ಭಕ್ತನನ್ನು ನೀನು ಹೇಗೆ ಕರೆದುಕೊಂಡು ಹೋಗುತ್ತೀಯಾ? ಎಂದು ಹೇಳಿದ ತಕ್ಷಣ ಯಮನು ಶಿವನಿಗೆ ನಮಸ್ಕರಿಸಿ ಮಾರ್ಕಂಡೇಯನನ್ನು ಬಿಟ್ಟು ಹೋದನು. ಇದು ಸೂಕ್ಷ್ಮವಾಗಿ ಈ ಪುರಾಣದ ಕಥೆ. ಇದರಲ್ಲಿರುವ ಅಂತರಾರ್ಥ ತಿಳಿಯೋಣ.

ಮಾರ್ಕಂಡೇಯನು ಎಂದರೆ ಮಾನವನು. ಶಿವಾ ಎಂದರೆ ಆತ್ಮ. ಯಮ ಎಂದರೆ ಮೃತ್ಯು ಎಂದು ಅರ್ಥ.

ಮಾರ್ಕಂಡೇಯನು ಸ್ವಲ್ಪ ಆಯುಷ್ಯದಿಂದ ಜನ್ಮಿಸಿದನೆಂದರೆ ಮಾರ್ಕಂಡೇಯನಷ್ಟೇ ಅಲ್ಲ, ಮಾನವರೆಲ್ಲರೂ ಅಲ್ಪಾಯುಷ್ಕರೇ. ಕಾರಣ ಮೇಲಿರುವ ದೇವರು, ದೇವತೆಗಳಿಗೆ ಹೋಲಿಸಿದರೆ ಮಾನವನ ಆಯುಷ್ಯ ಅಂದರೆ ಜೀವನ ತುಂಬಾ ಸ್ವಲ್ಪ, ಅಲ್ಪ. ಆದ್ದರಿಂದ ಮಾನವ ಜೀವನವನ್ನು ಗಾಳಿಗುಳ್ಳೆಗೆ ಹೋಲಿಸುತ್ತಾರೆ. ತೃಣ ಮಾತ್ರ ಎಂದು ಸಹ ಕರೆಯುತ್ತಾರೆ.

ಮಾರ್ಕಂಡೇಯನ ವೃತ್ತಾಂತದಿಂದ ಮತ್ತೊಂದು ವಿಷಯ ತಿಳಿಯಬೇಕು. ಯಾರಾದರೂ ಸರಿ ಆಯುಷ್ಯ ಮುಗಿದರೆ ಶರೀರ ಬೀಡಲೇಬೇಕು. ಒಂದು ವೇಳೆ ಶರೀರ ಬಿಡಬಾರದೆಂದು ನೀವು ನಿಶ್ಚಯಿಸಿಕೊಂಡರೆ! ಅಂದರೆ ನೀವಿನ್ನೂ ಭೂಮಿ ಮೇಲೆ ಇರಬೇಕೆಂದು ನಿಶ್ಚಯಿಸಿದರೆ! ಮಾರ್ಕಂಡೇಯನ ಹಾಗೇ ನೀವು ಸಹ ಶಿವನನ್ನು ಆಶ್ರಯಿಸಬೇಕು. ಅಂದರೇ ಆತ್ಮನನ್ನು ಆಶ್ರಯಿಸಬೇಕು. ಆಗ ಯಮನು ಅಂದರೆ ಮೃತ್ಯು ನಿಮ್ಮನ್ನು ಏನೂ ಮಾಡುವುದಿಲ್ಲ ಅಂದರೆ ನಮಗೆ ಸಾವು ಬರುವುದಿಲ್ಲವೆಂದು ಅರ್ಥ.

ಆ ಸ್ಥಿತಿ ಬರಬೇಕೆಂದರೆ ಈ ಸನ್ನಿವೇಶದಲ್ಲಿ ಮೊದಲು ಅರ್ಥ ತಿಳಿಯಬೇಕು. ಶಿವ ಎಂದರೆ ಲಿಂಗ ಅಲ್ಲ, 'ಆತ್ಮ' ಈ ವಿಷಯವೇ ವೇಮನ ಯೋಗಿ ಸ್ಪಷ್ಟವಾಗಿ ಹೇಳಿದ್ದಾರೆ. ಅವರು ಏನೆಂದರೆಂದರೆ.....

**ಶಿಲೆಯನ್ನು ನೋಡಿ ನರರು ಶಿವನೆಂದು ಭಾವಿಸುತ್ತಾರೆ.**

**ಶಿಲೆಗಳು ಶಿಲೆಗಳೇ ಹೊರತು ಶಿವನಲ**

**ತನ್ನೊಳಗಿನ ಶಿವನನ್ನು ತಾನೇಗೆ ಅರಿಯನೋ!**

**ವಿಶ್ವಾಧಾಬಿರಾಮ ವಿನುರಮೇಮ.**

**ಭಾವಾರ್ಥ :-** ಶಿಲೆ ಎಂದರೆ ಕಲ್ಲನ್ನು ನೋಡಿ ಮಾನವರು ಶಿವನೆಂದು ಭಾವಿಸುತ್ತಿದ್ದಾರೆ.

ಆದರೆ ಕಲ್ಲು ಕಲ್ಲೆ ಹೊರತು ಶಿವ ಹೇಗೆ ಆಗುತ್ತಾನೇ? ಮಾನವರು ಆತ್ಮ ರೂಪದಲ್ಲಿ ತನ್ನಲ್ಲಿರುವ ಶಿವನನ್ನು ಏಕೆ ತಿಳಿಯುತ್ತಿಲ್ಲ? ಎಂದು ವೇಮನಯೋಗಿ ಪ್ರಶ್ನಿಸುತ್ತಿದ್ದಾರೆ.

ಅದಕ್ಕೆ ಆಂಜನೇಯ ಸ್ವಾಮಿ ರಾಮನನ್ನು ತನ್ನ ಹೃದಯವನ್ನು ಸೀಳಿ ತೋರಿಸಿದ್ದಾನೆ. ನಾವು ಅರ್ಥಮಾಡಿಕೊಂಡರೆ ಮಾರ್ಕಂಡೇಯನ ವೃತ್ತಾಂತವೆಲ್ಲಾ ಚೆನ್ನಾಗಿ ಅರ್ಥವಾಗುತ್ತದೆ. ಇದು ಅರ್ಥಮಾಡಿಕೊಳ್ಳದಿದ್ದರೆ ನೀವು ಎಂದಿಗೂ ಮಾರ್ಕಂಡೇಯರಾಗುವುದಿಲ್ಲ. ಶಿವನ ರಕ್ಷೆ ಪಡೆಯುವುದಿಲ್ಲ.

ಆದ್ದರಿಂದ ಶಿವನನ್ನು ಆಶ್ರಯಿಸುವುದೆಂದರೆ ಆತ್ಮನನ್ನು ಆಶ್ರಯಿಸಬೇಕೆಂದು ಅರ್ಥ. ಆತ್ಮನನ್ನು ಆಶ್ರಯಿಸಬೇಕೆಂದರೆ ಆತ್ಮ ಎಲ್ಲಿದೆ? ಆತ್ಮ ಎಲ್ಲರಲ್ಲೂ ಇದೆ. ನಿನ್ನಲ್ಲಿವೆ. ಶಿವನನ್ನು ಗಟ್ಟಿಯಾಗಿ ಹಿಡಿದುಕೊಳ್ಳುವುದೆಂದರೆ ನಿನ್ನಲ್ಲಿರುವ ಆತ್ಮವನ್ನು ಗಟ್ಟಿಯಾಗಿ ಹಿಡಿಯಬೇಕೆಂದು ಅರ್ಥ. ಆತ್ಮವನ್ನು ಗಟ್ಟಿಯಾಗಿ ಹಿಡಿದುಕೊಳ್ಳುವುದೆಂದರೆ ನಿರಂತರ ಆತ್ಮದೊಂದಿಗೆ ಇರಬೇಕು. ಆತ್ಮ ಸ್ಥಿತಿಯಲ್ಲಿರಬೇಕು. ಹಾಗೇ ಆತ್ಮದ ಜೊತೆ ಇರುವ ಮಾರ್ಗವೇ "ಉಸಿರಿನ ಮೇಲೆ ಧ್ಯಾನ".

ಹಾಗೆ ಯಾರಾದರೆ ನಿರಂತರ ಧ್ಯಾನ ಸ್ಥಿತಿಯಲ್ಲಿರುತ್ತಾರೋ ಅಂದರೆ ಬಾಹ್ಯ ವಿಷಯಗಳ ಮೇಲೆ ದೃಷ್ಟಿ ಇಡದೇ ಆತ್ಮದ ಜೊತೆಗೆ ಇರುತ್ತಾರೋ! ಅಂದರೆ ಶಿವನನ್ನು ಹಿಡಿಯುತ್ತಾರೋ! ಅವರಿಗೆ ಸಾವಿಲ್ಲ. ಅಂದರೆ ಶರೀರ ಬಿಡಬೇಕಾದ ಅವಶ್ಯವಿಲ್ಲ. ಅಂದರೆ ಅವರನ್ನು ಯಮ ಏನೂ ಮಾಡುವುದಿಲ್ಲ ಎಂದರ್ಥ.

ಆದ್ದರಿಂದ ತಿಳಿಯಿರಿ "ಆತ್ಮಕ್ಕೆ ಹತ್ತಿರವಾದರೆ ಶಿವನಿಗೆ ಹತ್ತಿರವಾದಂತೆ, ಅಂತವರಿಗೆ ಯಮನು ದೂರವಾದಂತೆ! ಅಂದರೆ ಮೃತ್ಯು ದೂರವಾದಂತೆ! ಅಂದರೆ ಸಾವಿಲ್ಲದಂತೆ!" ಹಾಗೆ ಎಷ್ಟೋ ಜನ ಯೋಗಿಗಳು ನಿರಂತರ ಧ್ಯಾನ ಸ್ಥಿತಿಯಲ್ಲಿ ಇರುತ್ತಾ ಕೆಲವು ಸಾವಿರ ವರ್ಷಗಳು ಶರೀರದ ಜೊತೆಗೆ ಇದಾರೆಂದು ಹೇಳಿಕೊಳ್ಳುತ್ತೇವೆ. ಹಾಗೇ ಮಹಾವತಾರ ಬಾಬಾಜೀ ಇದಾರೆಂದು ಹೇಳುತ್ತಾರೆ. ಹಾಗೇ ರಾಘವೇಂದ್ರಸ್ವಾಮಿ, ವೆಂಕಟೇಶ್ವರಸ್ವಾಮಿ, ಸಹ ಧ್ಯಾನ ಸ್ಥಿತಿಯಲ್ಲಿದ್ದಾರೆಂದು ಹೇಳಿಕೊಳ್ಳುತ್ತೇವೆ.

ಹಾಗೇ ಭಕ್ತ ಮಾರ್ಕಂಡೇಯನು ಸಹ ಆತ್ಮ ಹಿಡಿದಿದ್ದರಿಂದ ಅಂದರೆ ಧ್ಯಾನ ಮಾಡುತ್ತಾ ಆಯುಷ್ಯ ಮುಗಿದರೂ ಯಮನನ್ನು ಬರಲು ಬಿಟ್ಟಿಲ್ಲ. ಅಂದರೆ ಸಾವನ್ನು ಬಯಸಿದನು ಅಂದರೆ ನಾವು ಸಹ ನಿರಂತರ ಧ್ಯಾನದಲ್ಲಿದ್ದರೆ ಮರಣವಿಲ್ಲದಂತೆ ಮಾಡಿಕೊಳ್ಳಬಹುದು. ನಮಗೆ ಬೇಕಾಗಿದಷ್ಟು ಕಾಲ ಶರೀರದ ಜೊತೆ ಇರಬಹುದು. ಮತ್ತೆ "ಶ್ವಾಸ ಮೇಲೆ ಧ್ಯಾನ"ದ ಮೂಲಕ ಆತ್ಮದ ಜೊತೆ ಹೇಗೆ ಇರುವವೋ ತಿಳಿಯೋಣ. ಮೊದಲು ನಾವೆಂದರೆ ದೇಹ. ಒಂದೇ ಅಲ್ಲ, ದೇಹದ ಜೊತೆಗೆ ಮನಸ್ಸು, ಆತ್ಮ ಸಹ ಇದೆಯೆಂದು ತಿಳಿಯಬೇಕು. ಮತ್ತೆ ನಮ್ಮಲ್ಲಿರುವ ಆತ್ಮದ ಜೊತೆ ಹೇಗಿರಬೇಕೋ ತಿಳಿಯೋಣ.

ನಾವು ಕಣ್ಣು ತೆರೆದು ಇದ್ದರೆ ದೇಹದ ಜೊತೆಗೆ ಇರುತ್ತೇವೆ. ಆದರೆ ನಾವು ಆತ್ಮದಿಂದಿರಬೇಕಾಗಿದ್ದರಿಂದ ಮೊದಲು ಕಣ್ಣು ಮುಚ್ಚುತ್ತೇವೆ. ಯಾವಾಗಾದರೆ ಕಣ್ಣು ಮುಚ್ಚುತ್ತೇವೋ ತಕ್ಷಣ ಆಲೋಚನೆಗಳು ಬರುತ್ತವೆ. ಅಂದರೆ ನಾವು ಈಗ ದೇಹದ ಜೊತೆಯಿಲ್ಲ. ಆಲೋಚಿಸುವುದು ಮನಸ್ಸೇ ಆಗಿದ್ದರಿಂದ ನಾವು ಮನಸ್ಸಿನ ಜೊತೆ ಇದ್ದಂತೆ. ಆದರೆ ನಾವು ಇರಬೇಕಾಗಿದ್ದು ಮನಸ್ಸಿನ ಜೊತೆ ಅಲ್ಲ ಆತ್ಮದ ಜೊತೆ. ಆದ್ದರಿಂದ ಆಲೋಚನೆಗಳು ಉಸಿರಿನ ಮೇಲೆ ಬದಲಿಸುತ್ತೇವೆ. ಹಾಗೆ ಮಾಡುತ್ತಿದ್ದರೆ ಮೆಲ್ಲಕ್ಕೆ ಆಲೋಚನೆಗಳು ಕಡಿಮೆ ಆಗಿ ಒಂದು ಸ್ಥಿತಿಯಲ್ಲಿ ಆಲೋಚನೆಗಳೆಲ್ಲಾ ನಿಲ್ಲುತ್ತವೆ.

ಆಲೋಚನೆಗಳು ಇಲ್ಲ ಎಂದರೆ ಮನಸ್ಸು ಇಲ್ಲದಂತೆ ಅಲ್ಲವೇ? ಅಂದರೆ ಈ ಸ್ಥಿತಿಯಲ್ಲಿ ಇರುವುದು ಆತ್ಮ ಅಲ್ಲವೇ? ಅಂದರೆ ಈ ಸ್ಥಿತಿಯಲ್ಲಿ ನಾವು ಆತ್ಮದ ಜೊತೆಗೆ ಇದ್ದಂತೆ. ಮತ್ತೆ ಆತ್ಮದ ಜೊತೆ ಇದ್ದರೆ ನಾವು ಶಿವನ ಜೊತೆ ಇದ್ದಂತೆ ಅಲ್ಲವೇ? ಹಾಗೆ ನಾವು ಶಿವನ ಜೊತೆಗೆ ಇದ್ದಾಗ ಯಮನು ನಮ್ಮನ್ನು ಏನು ಮಾಡುತ್ತಾನೆ? ನಮ್ಮ ಹತ್ತಿರ ಬರುವ ಸಾಹಸ ಮಾಡಬಲ್ಲನೇ? ಆದ್ದರಿಂದ ಧ್ಯಾನ ಮಾಡಿದರೆ ಯಮನಾದರೂ ಓಡಿ ಹೋಗಲೇಬೇಕು. ಅಂದರೆ ಮೃತ್ಯು ನಮ್ಮನ್ನು ಏನು ಮಾಡುವುದಿಲ್ಲವೆಂದು ತಿಳಿಯಬೇಕು. ಮೃತ್ಯುವಾದರು ಓಡಿಹೋಗಬೇಕು.

ಇದರ ಮೂಲಕ ನಾವು ಅರ್ಥಮಾಡಿಕೋಳ್ಳಬೇಕಾಗಿದ್ದು ಧ್ಯಾನ ಸ್ಥಿತಿಯಲ್ಲಿರುವವರು ಅವರು ಬೇಕೆನ್ನುವಷ್ಟು ಕಾಲ ಆಯುಷ್ಯ ಮುಗಿದರೂ ಜೀವಿಸುತ್ತಾರೆಂದು ತಿಳಿಯಬೇಕು. ಅಂದರೆ ಶರೀರದಿಂದ ಇರುವರೆಂದು ತಿಳಿಯಬೇಕು. ಇದೇ ನಾವು ಮಾರ್ಕಂಡೇಯ ಪುರಾಣದಿಂದ ತಿಳಿಯಬೇಕಾದ ಸಂದೇಶ. ತಿಳಿಯಿರಿ. ಧ್ಯಾನ ಮಾಡಿದರೆ ಆತ್ಮವನ್ನು ಅಂದರೆ ಶಿವನನ್ನು ಆಶ್ರಯಿಸಿದಂತೆ. ಪೂಜೆ ಮಾಡಿದರೆ ಲಿಂಗವನ್ನು ಅಂದರೆ ಕಲ್ಲನ್ನು ಆಶ್ರಯಿಸಿದಂತೆ ಆದ್ದರಿಂದ ಧ್ಯಾನ ಮಾಡಿರಿ ಶಿವನನ್ನು ಆಶ್ರಯಿಸಬೇಕು.

**ಧ್ಯಾನ ಮಾಡದಿದ್ದರೆ ಯಮನು ಹತ್ತಿರವಾಗುತ್ತಾನೆ**
**ಧ್ಯಾನ ಮಾಡಿದರೆ ಯಮನು ದೂರವಾಗುತ್ತಾನೆ.**

# ಧರ್ಮವ್ಯಾಧನು

ತಂದೆ ತಾಯಿಯನ್ನು ಗೌರವಿಸಬೇಕು. ಸೇವೆ ಮಾಡಬೇಕು ಎಂಬ ಸಂದೇಶವನ್ನು "ಧರ್ಮವ್ಯಾಧನ" ಕಥೆಯ ಮೂಲಕ ಪಂಡಿತರು ನೀಡಿದ್ದಾರೆ. ಅಷ್ಟೇ ಹೊರತು ಅಲ್ಲಿ ಅವನ ವೃತ್ತಿ ಪ್ರಧಾನವಲ್ಲ. ಅಂತಹ ವೃತ್ತಿ ಮಾಡಿದರೂ ಸಹ ತಂದೆ ತಾಯಿಯನ್ನು ಗೌರವಿಸುವುದರಿಂದ ಅವನು ಶ್ರೇಷ್ಠ ಜ್ಞಾನಿ ಆದನು ಎನ್ನುವುದೇ ಅಲ್ಲಿರುವ ಸಂದೇಶ. ಈ ಕಥೆಯ ಮೂಲಕ ತಂದೆ ತಾಯಿಯನ್ನು ಗೌರವಿಸುವುದರಲ್ಲಿರುವ ಶ್ರೇಷ್ಠತೆಯನ್ನು ತಿಳಿಯಬೇಕು.

# ಪತಿವ್ರತೆಯರು

ಗಂಡನನ್ನು ಗೌರವಿಸಬೇಕು ಎಂಬ ಸಂದೇಶವನ್ನು ಪತಿವ್ರತೆಯರ ಕಥೆಗಳು ಅಂದರೆ ಸತೀ ಸಾವಿತ್ರಿ, ಸತಿ ಅನಸೂಯೆಯಂತಹವರ ಕಥೆಗಳ ಮೂಲಕ ನೀಡಿದ್ದಾರೆ. ಅಷ್ಟೇ ಹೊರತು ಗಂಡ ಹಿಂಸಿಸಿದರೂ ಭರಿಸುತ್ತಿರಬೇಕು ಎಂದು ಅಲ್ಲಿರುವ ಸಂದೇಶವಲ್ಲ.



## ಧ್ಯಾನ ಮಾಡುವ ಪದ್ಧತಿ
## ಶ್ವಾಸದ ಮೇಲೆ ಧ್ಯಾಸ



ಸುಖಾಸನದಲ್ಲಿ ಹಾಯಾಗಿ ಕುಳಿತಿಕೊಂಡು... ಎರಡು ಕೈಗಳನ್ನು ಜೋಡಿಸಿ... ಎರಡು ಕಣ್ಣುಗಳನ್ನು ಮುಚ್ಚಿಕೊಂಡು... ಪ್ರಕೃತಿ ಸಹಜವಾಗಿ ನಡೆಯುತ್ತಿರುವ ಉಚ್ಛಾಸ, ನಿಶ್ವಾಸಗಳನ್ನು ಗಮನಿಸುತ್ತಿರಬೇಕು!

ಮಧ್ಯ ಮಧ್ಯದಲ್ಲಿ ಅನೇಕಾನೇಕ ಆಲೋಚನೆಗಳು ಬರುತ್ತಿದ್ದರೂ ಅವುಗಳನ್ನು ಆಗಿಂದಾಗ 'ಕಟ್' ಮಾಡುತ್ತಾ... ಪುನಃ-ಪುನಃ ಶ್ವಾಸದ ಮೇಲೆ ಗಮನಿಸುತ್ತಿದ್ದರೆ ಕ್ರಮೇಣ... ಆಲೋಚನಾರಹಿತ ಸ್ಥಿತಿ ಉಂಟಾಗುತ್ತದೆ. ಚಿತ್ತವೃತ್ತಿಗಳೂ ನಿರೋಧಿಸಲ್ಪಡುತ್ತದೆ... ಮನಸ್ಸು ಶೂನ್ಯ ಆಗಿಬಿಡುತ್ತದೆ. ಮನಸ್ಸು ಶಾಂತಿಸುತ್ತದೆ. ಇದೇ ಧ್ಯಾನ ಸ್ಥಿತಿ.

ಈ ಆಲೋಚನಾ ರಹಿತ ಸ್ಥಿತಿಯಲ್ಲಿ ಕಲ್ಪಿಸುವ ಅನೇಕಾನೇಕ ಶಾರೀರಿಕ, ನಾಡೀ ಮಂಡಲ, ಆತ್ಮಾನುಭವಗಳನ್ನು ಗಮನಿಸುತ್ತಿರಬೇಕು. ಆ ಸ್ಥಿತಿಯಲ್ಲಿ ವಿಶ್ವಮಯ ಪ್ರಾಣಶಕ್ತಿ, ಅಪಾರವಾಗಿ ಶರೀರದಲ್ಲಿ ಪ್ರವೇಶಿಸಿ ನಾಡೀ ಮಂಡಲವನ್ನು ಶುದ್ಧಿ ಮಾಡುತ್ತದೆ. ಆ ಶಕ್ತಿಯಿಂದ ರೋಗಗಳೆಲ್ಲಾ ಕಡಿಮೆ ಆಗುತ್ತವೆ. ನಾಡೀ ಮಂಡಲ ಶುದ್ಧಿಯಿಂದ ಕರ್ಮಗಳು ತೋಲಗುತ್ತವೆ.

ಪ್ರತಿ ದಿನ ಯಾರ ವಯಸ್ಸು ಎಷ್ಟು ಇರುತ್ತದೆಯೋ... ಕನಿಷ್ಟ ಪಕ್ಷ ಅಷ್ಟು ನಿಮಿಷಗಳು... ತಪ್ಪದೇ... ದಿನಕ್ಕೆ ಎರಡು ಬಾರಿ... ಧ್ಯಾನ ಮಾಡಬೇಕು.

# ಪಿರಮಿಡ್ ಧ್ಯಾನಿಗಳ ೧೮ ಆದರ್ಶ ಸೂತ್ರಗಳು

೧. "ಸರಿಯಾದ ಧ್ಯಾನ" ಅಂದರೆ "ಆನಾಪಾನಸತಿ"ಯನ್ನು ಕ್ರಮ ತಪ್ಪದೇ ಅಭ್ಯಾಸ ಮಾಡುವುದು "ಆನಾಪಾನಸತಿ" ಧ್ಯಾನವನ್ನು ಎಲ್ಲರಿಂದಲೂ ಮಾಡಿಸುವುದು.

೨. ಸರಿಯಾದ ಆತ್ಮವಿಜ್ಞಾನ ಪುಸ್ತಕಗಳನ್ನು ಓದುವುದು. ಉದಾ: ಸ್ವಾಮಿ ರಾಮಾ, ಯೋಗಾನಂದ ಪರಮಹಂಸ, ಓಷೋ, ಲೋಬ್‌ಸಾಂಗ್ ರಾಂಪಾ, ಕಾಸ್ಟಾನೆಡಾ, ಜೇನ್ ರಾಬರ್ಟ್ಸ್, ರಿಚರ್ಡ್ ಬಾಕ್, ಅನಿಬೆಸೆಂಟ್, ಲಿಂಡಾ ಗುಡ್‌ಮಾನ್, ದೀಪಕ್ ಚೋಪ್ರಾ, ಬ್ರಯಾನ್ ವೈಸ್, ಸಿಲ್ವಿಯಾ ಬ್ರೌನ್ ಮುಂತಾದ ಗ್ರಾಂಡ್ ಮಾಸ್ಟರ್‌ಗಳ ಗ್ರಂಥಗಳನ್ನು ಅಧ್ಯಯನ ಮಾಡುವುದು.

೩. ಧ್ಯಾನಾನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳುವುದು.

೪. ಸಾಧ್ಯವಾದಷ್ಟು ಮೌನವನ್ನು ಅಳವಡಿಕೊಳ್ಳುವುದು.

೫. ಹುಣ್ಣಿಮೆ ಧ್ಯಾನ ತಪ್ಪದೇ ಮಾಡಬೇಕು. ಸಾಧ್ಯವಾದಷ್ಟು ಸಾಮೂಹಿಕವಾಗಿ!...

೬. ಧ್ಯಾನಕ್ಕೆ ಪಿರಮಿಡ್ ಶಕ್ತಿಯನ್ನು ಯಥೇಚ್ಛವಾಗಿ ಉಪಯೋಗಿಸಿಕೊಳ್ಳಬೇಕು.

೭. ಅಲೋಪತಿ ಔಷಧಿಗಳನ್ನು ಪೂರ್ತಿಯಾಗಿ ಬಿಡುವುದು!... ಸ್ವತಃ ಧ್ಯಾನ ಶಕ್ತಿಯಿಂದಲೇ ಅವರಿಗವರೇ ಸ್ವಸ್ಥತೆ ಹೊಂದುವುದು.

೮. ಹೊಟ್ಟೆ ಸೇರಿದಂತೆ ಮಾಂಸಾಹಾರವನ್ನು ತ್ಯಜಿಸುವುದು ಸಸ್ಯಾಹಾರದಲ್ಲಿಯೂ ಮಿತಾಹಾರವೇ ಯುಕ್ತ.

೯. ಪ್ರಕೃತಿಯೊಂದಿಗೆ ಸಹಜೀವನ ಕಳೆಯುತ್ತಾ ಇರುವುದು ಹೆಚ್ಚಾಗಿ ಅರಣ್ಯದಲ್ಲಿ ಟ್ರೆಕ್ಕಿಂಗ್‌ಗಳನ್ನು ಮಾಡುವುದು.

೧೦. ಪ್ರತ್ಯೇಕ 'ಆಧ್ಯಾತ್ಮಿಕ' ದಿರಿಸು, ವೇಷಭೂಷಣಗಳು ಇಲ್ಲದಿರುವುದು ವ್ಯರ್ಥವಾದ ಕರ್ಮಕಾಂಡಗಳನ್ನು ಮಾಡದಿರುವುದು.

೧೧. ಚಿಕ್ಕಂದಿನಿಂದಲೇ ಮಕ್ಕಳಿಗೆ "ಆನಾಪಾನಸತಿ" ಧ್ಯಾನದ ಬಗ್ಗೆ ಶಿಕ್ಷಣ ಕೊಡುವುದು.

೧೨. ಪ್ರತಿಯೊಬ್ಬರೂ ಗುರುಗಳಾಗಿ ತಯಾರಾಗುವುದು 'ಶಿಷ್ಯ'ರಾಗಿ ಮಾತ್ರವಲ್ಲದೆ 'ಮಾಸ್ಟರ್'ಗಳಾಗಿ ಇರುವುದು.

೧೩. ಧ್ಯಾನ ಶಿಕ್ಷಣ ಕಾರ್ಯಕ್ರಮದಲ್ಲಿ ಹಣವನ್ನು ತೆಗೆದುಕೊಳ್ಳಬಾರದು.

೧೪. ವಿಗ್ರಹಾರಾಧನೆ ಎನ್ನುವುದು ಸಂಪೂರ್ಣ ನಿಷಿದ್ಧ. ಆತ್ಮ ಆರಾಧನೆಯೇ ಮುಕ್ತಿಗೆ ಮಾರ್ಗ!..

೧೫. ಸ್ವಂತ ಆತ್ಮ ಶಕ್ತಿಯಿಂದಲೇ ಸರ್ವ ವ್ಯಕ್ತಿಗತ ಸಮಸ್ಯೆಗಳನ್ನು ಆಗಿಂದಾಗಲೇ ಪರಿಹರಿಸಿಕೊಳ್ಳುವುದು.

೧೬. ಸಾಧಾರಣ ಗೃಹಸ್ಥ ಜೀವನವನ್ನು ಆನಂದದಿಂದ ಕಳೆಯುವುದು.

೧೭. ಎಲ್ಲಾ ಗ್ರಾಮಗಳಲ್ಲೂ, ಎಲ್ಲಾ ಪಟ್ಟಣಗಳಲ್ಲೂ ಪಿರಮಿಡ್ ಧ್ಯಾನ ಕೇಂದ್ರಗಳನ್ನು ಸ್ಥಾಪಿಸುವುದು.

೧೮. ಸ್ವಂತ ಧ್ಯಾನಾನುಭವಗಳನ್ನು, ಆಧ್ಯಾತ್ಮಿಕ ಪ್ರಗತಿ ವಿಶೇಷಗಳನ್ನು ಗ್ರಂಥಗಳ ರೂಪದಲ್ಲಿ ಪ್ರಕಟಣೆ ಮಾಡುವುದು.

55



# ಶ್ರೀ ರಾಮಧಾಮ ಧ್ಯಾನಕೇಂದ್ರ

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.
ಸಂಪರ್ಕಿಸಿ : **ಹೆಚ್. ಎನ್. ಶ್ರೀನಿವಾಸ,** 9449695503
**ವಿಜಯಲಕ್ಷ್ಮೀ ಎಸ್.ಎನ್.** 80500 82689

## ಆತ್ಮಜ್ಞಾನ ಶಿಕ್ಷಣ ಶಿಬಿರ ಕಾರ್ಯಕ್ರಮಗಳು

* ಪ್ರತಿ ಸೋಮವಾರ ಸಂಜೆ 6.30 ರಿಂದ 8.30 ರವರೆಗೆ ಧ್ಯಾನ ತರಗತಿಗಳು ನಡೆಯುತ್ತವೆ.
* ಹುಣ್ಣಿಮೆ ಹಾಗೂ ಅಮಾವಾಸ್ಯೆ ಧ್ಯಾನ
* ಪ್ರತಿ ಆರು ತಿಂಗಳಿಗೊಮ್ಮೆ ಆತ್ಮಜ್ಞಾನ ಶಿಕ್ಷಣ ಶಿಬಿರ ಉಚಿತವಾಗಿ ನಡೆಯುತ್ತದೆ ಇದರ ವಿವರಗಳನ್ನು ಧ್ಯಾನಕಸ್ತೂರಿಯಲ್ಲಿ ಹಾಗೂ ಪಿಎಂಸಿ ಕನ್ನಡ ಚಾನೆಲ್‌ನಲ್ಲಿ ಪ್ರಕಟಿಸಲಾಗುವುದು.

## ಶ್ರೀ ರಾಮ ಪಬ್ಲಿಕೇಶನ್ಸ್‌ನಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| 1. | ಅಹಿಂಸೆ & ಶಾಖಾಹಾರ | ರೂ. 20 |
| 2. | ನವವಿಧ ಧರ್ಮಗಳು | ರೂ. 15 |
| 3. | ಸಸ್ಯಾಹಾರವೇ ಮಾನವಾಹಾರ | ರೂ. 20 |
| 4. | ಧ್ಯಾನ | ರೂ. 40 |
| 5. | ವಿದ್ಯಾರ್ಥಿಗಳ ವಿಕಾಸಕ್ಕೆ ಧ್ಯಾನ ವಿದ್ಯೆ | ರೂ. 40 |
| 6. | ಭಾಗವತ ಸನ್ನಿವೇಶಗಳ ಅಂತರಾರ್ಥ | ರೂ. 40 |
| 7. | ಷಿರಿಡಿ ಸಾಯಿ ಸಂದೇಶಗಳು | ರೂ. 40 |
| 8. | ಪ್ರಾಣ ಶಕ್ತಿ | ರೂ. 100 |
| 9. | ಜೀವನದ ಸೂಕ್ಷ್ಮಗಳು | ರೂ. 60 |
| 10. | ವಿದ್ಯಾರ್ಥಿ ಜೀವನ ಕ್ರಾಂತಿ | |
| 11. | ಸಂಘಂ ಶರಣಂ ಗಚ್ಛಾಮಿ | ರೂ.300 |

ಪುಸ್ತಕಗಳಿಗಾಗಿ ಸಂಪರ್ಕಿಸಿ
**ಶ್ರೀರಾಮ ಪಬ್ಲಿಕೇಶನ್ಸ್**
ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.

# "ಧ್ಯಾನ ಮಾಡುವ ವಿಧಾನ"

ಯಾವುದಾದರೂ ಸುಖಾಸನದಲ್ಲಿ .. ಹಾಯಾಗಿ ಕುಳಿತುಕೊಂಡು ..
ಕೈಗಳೆರಡೂ ಸೇರಿಸಿಕೊಂಡು .. ಕಣ್ಣೆರೆಡೂ ಮುಚ್ಚಿಕೊಂಡು ..
ಪ್ರಕೃತಿ ಸಹಜವಾಗಿ ನಡೆಯುತ್ತಲಿರುವ ಉಚ್ಛ್ವಾಸ, ನಿಶ್ವಾಸಗಳನ್ನೇ ..
ಏಕಧಾರೆಯಾಗಿ .. ಗಮನಿಸುತ್ತಾ ಇರಬೇಕು!

**ಧ್ಯಾನವನ್ನು ಯಾರಾದರೂ ಮಾಡಬಹುದು**
**ಯಾವ ವಯಸ್ಸಿನವರಾದರೂ ಮಾಡಬಹುದು**
**ಯಾವ ಸಮಯದಲ್ಲಿಯಾದರೂ ಮಾಡಬಹುದು**
**ಯಾವ ಸ್ಥಳದಲ್ಲಿಯಾದರೂ ಮಾಡಬಹುದು.**

**ಧ್ಯಾನವನ್ನು ನಿಯಮಿತವಾಗಿ ತಪ್ಪದೇ ಮಾಡಬೇಕು....**

ಅವರವರ ವಯಸ್ಸಿಗೆ ಅನುಗುಣವಾಗಿ ಪ್ರತಿಯೊಬ್ಬರೂ, ಪ್ರತಿನಿತ್ಯವೂ ಧ್ಯಾನ ಮಾಡಬೇಕು
ಉದಾಹರಣೆಗೆ, ನಿಮ್ಮ ವಯಸ್ಸು ಇಪ್ಪತ್ತು ವರ್ಷಗಳಾಗಿದ್ದರೆ, ಇಪ್ಪತ್ತು ನಿಮಿಷಗಳ ಕಾಲ ಧ್ಯಾನ ಮಾಡಬೇಕು.
ನಿಮ್ಮ ವಯಸ್ಸು ನಲವತ್ತು ವರ್ಷಗಳಾಗಿದ್ದರೆ ನಲವತ್ತು ನಿಮಿಷಗಳ ಕಾಲ
ಹೀಗೆ ವಯಸ್ಸಿಗೆ ಅನುಗುಣವಾಗಿ ಧ್ಯಾನ ಮಾಡಬೇಕು.

## ಬ್ಯಾಂಕ್ ಖಾತೆಗೆ ಹಣ ಪಾವತಿಸಿ ಚಂದಾದಾರರಾಗಬಹುದು

| | | |
|---|---|---|
| ಬ್ಯಾಂಕ್ ಹೆಸರು | : ಭಾರತೀಯ ಸ್ಟೇಟ್ ಬ್ಯಾಂಕ್ | – State Bank of India |
| ಶಾಖೆಯ ಹೆಸರು | : ಚಾಮರಾಜಪೇಟೆ ಶಾಖೆ | – Chamarajapete Branch |
| ಖಾತೆ ಸಂಖ್ಯೆ | : 30828057680 : I.F.S.C. ಕೋಡ್ | – S.B.I.N 0005794 |
| ಖಾತೆಯ ಹೆಸರು | : ಕೆ.ಪಿ.ಡಿ.ಪಿ. ಟ್ರಸ್ಟ್–ಅಕೌಂಟ್–ಧ್ಯಾನ ಕಸ್ತೂರಿ | – K.P.D.P. Trust A/c. Dhaya Kasturi |

ಧ್ಯಾನ ಕಸ್ತೂರಿ ಮಾಸ ಪತ್ರಿಕೆಗೆ ಆನ್‌ಲೈನ್‌ನಲ್ಲಿಯೇ
ಚಂದಾದಾರರಾಗಬಹುದು.
ಕನ್ನಡ ಆಧ್ಯಾತ್ಮಿಕ ಪುಸ್ತಕಗಳನ್ನು ಆನ್‌ಲೈನ್‌ನಲ್ಲಿಯೇ ಖರೀದಿಸಬಹುದು.
ಇದಕ್ಕಾಗಿ ನಿಮ್ಮ ಮೊಬೈಲ್ ಬಳಸಿ ಪಕ್ಕದಲ್ಲಿರುವ ಕ್ಯೂ ಆರ್ ಕೋಡನ್ನು
ಸ್ಕ್ಯಾನ್ ಮಾಡಿ, ನಂತರ ಕಾಣಿಸಿಕೊಳ್ಳುವ ಲಿಂಕ್ ಅನ್ನು ಕ್ಲಿಕ್ ಮಾಡಿ.



ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಿ
**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್** (ರಿ)
# 1534/1, ಒಂದನೇ ಮಹಡಿ 26ನೇ ಮುಖ್ಯರಸ್ತೆ, ರಾಗಿಗುಡ್ಡ ಆಂಜನೇಯ ದೇವಸ್ಥಾನದ ಹತ್ತಿರ
9ನೇ ಬ್ಲಾಕ್, ಜಯನಗರ, ಬೆಂಗಳೂರು – 560 069
**ವಾಟ್ಸಾಪ್ ಅಥವಾ ಕರೆಮಾಡಿ : 7618731963; 9901598073**



ಲೋಕದಲ್ಲಿ ಶ್ರೀಕೃಷ್ಣ ಭಗವಾನನ ಜೀವನದಲ್ಲಿ ನಡೆದ ಘಟನೆಗಳು ಸಿನಿಮಾಗಳ ರೂಪದಲ್ಲಿ, ಟಿ.ವಿ. ಸಿರಿಯಲ್ಸ್ ರೂಪದಲ್ಲಿ ನಾಟಕಗಳ ರೂಪದಲ್ಲಿ ಚಿತ್ರಿಸಿಕೊಂಡು ನೋಡಿ ವಿನೋದಿಸುತ್ತಿದ್ದಾರೆ. ಕಾಲಕ್ಷೇಪಕ್ಕೆ ಉಪಯೋಗಿಸಿ ಕೊಳ್ಳುತ್ತಿದ್ದಾರೆ.

ಆದರೆ ಅಂತಹ ಮಹಾನುಭಾವರ ಜೀವನ ಚರಿತ್ರೆಯನ್ನು ವಿನೋದವಾಗಿ ನೋಡುವುದಕ್ಕೆ ವ್ಯಾಸಮಹರ್ಷಿಗಳು ಈ ಲೋಕಕ್ಕೆ ಅದನ್ನು ಕೊಟ್ಟಿಲ್ಲ. ಶ್ರೀಕೃಷ್ಣನ ಜೀವನದಲ್ಲಿ ಪ್ರತಿಯೊಂದು ಸನ್ನಿವೇಶದ ಮೂಲಕ ಒಂದು ಸಂದೇಶವನ್ನು ಲೋಕಕ್ಕೆ ಕೊಡಲಾಗಿದೆ. ಆದ್ದರಿಂದ, ಪ್ರತಿಯೊಂದೂ ಸನ್ನಿವೇಶವನ್ನು ವಿನೋದಾತ್ಮಕವಾಗಿ ನೋಡಬೇಕು. ವಿನೋದಕ್ಕೆ ಉಪಯೋಗಿಸಿಕೊಳ್ಳುವುದಲ್ಲ. ಆ ಸನ್ನಿವೇಶದಲ್ಲಿರುವ ಅಂತರಾರ್ಥವನ್ನು ತಿಳಿದುಕೊಂಡು ಆ ಸಂದೇಶಗಳನ್ನು ಆಚರಣೆಯಲ್ಲಿಡಬೇಕು. ಹಾಗೆ ಯಾರೇ ಆಚರಿಸಿದರೂ ಅವರ ಜೀವನವು ಧನ್ಯವಾಗುತ್ತದೆ.

ಭಾಗವತದಲ್ಲಿರುವ ಕೆಲವು ಸನ್ನಿವೇಶಗಳ ಅಂಥರಾರ್ಥವನ್ನು ಈ ಪುಸ್ತಕದ ಮೂಲಕ ತಿಳಿಸಲಾಗಿದೆ. ಓದುಗರು ಸಹೃದಯದಿಂದ ಗ್ರಹಿಸಿ ಆಚರಣೆ ಯಲ್ಲಿಟ್ಟು ಜೀವನವನ್ನು ಧನ್ಯ ಮಾಡಿಕೊಳ್ಳುವಿರೆಂದು ಆಶಿಸುತ್ತೇನೆ.

ನಿಮ್ಮ ಆತ್ಮಬಂಧು
ತಟವರ್ತಿ ವೀರರಾಘವರಾವ್

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**

ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ

https: //www.youtube.com/pmckannada ● www.meditationeverywhere.org ● www.pssmovement.org


## ಶ್ರೀರಾಮ ಪಬ್ಲಿಕೇಶನ್ಸ್

ಶ್ರೀರಾಮಧಾಮ ಧ್ಯಾನಕೇಂದ್ರ, ನಾರಾಯಣಪ್ಪ ಗಾರ್ಡನ್,
ವೈಟ್ ಫೀಲ್ಡ್, ಬೆಂಗಳೂರು - 560 066


ಸಂಪರ್ಕಿಸಿ : ಹೆಚ್.ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮಿ ಎಸ್.ಎನ್. + 91 80500 82689